# ನವೋದಯ ಕಾಲದ ಕನ್ನಡ ವಿಮರ್ಶೆ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ


ಸಂಶೋಧಕರು

**ಮುನೀಶ್. ಸಿ.**

ಮಾರ್ಗದರ್ಶಕರು

**ಡಾ. ಅರ್ಜುನಪುರಿ ಅಪ್ಪಾಜಿಗೌಡ**





ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮

# ನವೋದಯ ಕಾಲದ ಕನ್ನಡ ವಿಮರ್ಶೆ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ

ಸಂಶೋಧಕರು
**ಸುನೀತ. ಸಿ.**



ಮಾರ್ಗದರ್ಶಕರು
**ಡಾ. ಅರ್ಜುನಪುರಿ ಅಪ್ಪಾಜಿಗೌಡ**







ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭ - ೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್. ಪದವಿಯ ವಿದ್ಯಾರ್ಥಿಯಾದ KSM/00208 ಅವರು ನನ್ನ ಮಾರ್ಗದರ್ಶನದಲ್ಲಿ **'ನವೋದಯ ಕಾಲದ ಕನ್ನಡ ವಿಮರ್ಶೆ'** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲೀ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಅರ್ಜುನಪುರಿ ಅಪ್ಪಾಜಿಗೌಡ 18/05

ದಿನಾಂಕ: 10.05.2008

ಸ್ಥಳ:ಮಂಡ್ಯ

**ಮಾರ್ಗದರ್ಶಕರು**

**ಡಾ.ಅರ್ಜುನಪುರಿ ಅಪ್ಪಾಜಿಗೌಡ**

ನಿವೃತ್ತ ಕನ್ನಡ ಪ್ರಾಧ್ಯಾಪಕರು

ಹೆಚ್.ಕೆ.ವೀರಣ್ಣಗೌಡ ಸಂಯುಕ್ತ ಪದವಿ ಕಾಲೇಜು

ಮದ್ದೂರು.

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭ - ೨೦೦೮ನೇ ಸಾಲಿನ ಕನ್ನಡ ಎಂ.ಫಿಲ್. ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **'ನವೋದಯ ಕಾಲದ ಕನ್ನಡ ವಿಮರ್ಶೆ '** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಡಾ. ಅರ್ಜುನಪುರಿ ಅಪ್ಪಾಜಿಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಯನಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಅಭ್ಯರ್ಥಿಯ ಸಹಿ

ದಿನಾಂಕ : ೧೦-೦೯-೨೦೦೮
ಸ್ಥಳ : ಮಂಡ್ಯ

(ಸುನೀತ.ಸಿ)

# ಪರಿವಿಡಿ

# ನಿಬಂಧದ ಉದ್ದೇಶ ಮತ್ತು ವ್ಯಾಪ್ತಿ

ದೈನಂದಿನ ಜೀವನದಲ್ಲಿ ಮಾನವ ಕೈಗೊಳ್ಳುವ ಪ್ರತಿಯೊಂದು ಕೆಲಸದ ಹಿಂದೆ ಒಂದು ಗುರಿ, ಉದ್ದೇಶ ಮತ್ತು ಧ್ಯೇಯ ಇದ್ದೇ ಇರುತ್ತದೆ. ಗುರಿ ಇಲ್ಲದ ಜೀವನ ಅಂಬಿಗನಿಲ್ಲದ ಹರಿಗೋಲಿನಂತೆ ನಿರರ್ಥಕ. ಉದ್ದೇಶವಿಲ್ಲದೆ ಮಾಡುವ ಕೆಲಸ ಯಶಸ್ಸುಗೊಳಿಸುತ್ತದೆಂದು ಹೇಳಲಾಗುವುದಿಲ್ಲ. ಗಳಿಸಿದರೂ ಅದು ಮೌಲಿಕವಾದ ಯಶಸ್ಸಾಗುವುದಿಲ್ಲ. ಸುದುದ್ದೇಶ ಇಟ್ಟುಕೊಂಡು ವಿಸ್ತರಿಸಿ ನಡೆದರೆ, ಆಯ್ದುಕೊಂಡ ವಿಚಾರದಲ್ಲಿ ಆಸಕ್ತಿ ಹೆಚ್ಚಾಗಿ, ಅರಿವಿನ ಎಲ್ಲಯೂ ವಿಸ್ತರಿಸಿ, ನಮ್ಮ ಕಾರ್ಯ ಬೆಲೆಯುಳ್ಳದ್ದು ಆಗುವಂತೆ ಮಾಡುತ್ತದೆ. ಹೀಗಾಗಿ ನಾವು ಏನೇ ಕೆಲಸ ಕೈಗೊಂಡರೂ ಒಂದು ಉದ್ದೇಶವಿರಲೇಬೇಕು.

19ನೇ ಶತಮಾನವು ಕನ್ನಡ ಸಾಹಿತ್ಯದಲ್ಲಿ ಹೊಸಯುಗವನ್ನು ಪ್ರಾರಂಭಿಸಿತು. ಕನ್ನಡ ಸಾಹಿತ್ಯವು ಹೊಸದಿಕ್ಕಿನತ್ತ ಸಾಗಿದ ಕಾಲವದು. ಆಂಗ್ಲ ಸಾಹಿತ್ಯದ ಪ್ರಭಾವದಿಂದ ಕನ್ನಡ ಸಾಹಿತ್ಯ ಹೊಸ-ಹೊಸ ಸಾಹಿತ್ಯ ರೂಪಗಳನ್ನು ಸ್ವೀರಿಸಿತು. ಅವುಗಳಲ್ಲಿ 'ವಿಮರ್ಶೆ'ಯೂ ಒಂದು ಹಿಂದಿನ ಸಂಪ್ರದಾಯವನ್ನು ಬಿಟ್ಟು ಹೊಸ ದಿಕ್ಕಿಗೆ ಮುಖಮಾಡಿದ ಸಂದರ್ಭದಲ್ಲಿ ಅಂದರೆ ನವೋದಯ ಕಾಲದಲ್ಲಿ ಕಂಡುಬಂದ ವಿಮರ್ಶಾ ಪ್ರವಾಹದ ಪ್ರಾತಿನಿಧಿಕ ಕೃತಿಗಳನ್ನಷ್ಟೇ ಅಧ್ಯಯನ ಮಾಡುವುದು ಈ ನಿಬಂಧದ ಉದ್ದೇಶವಾಗಿದೆ. ಇಲ್ಲಿ ಎರಡು ಅಂಶಗಳು ಸೇರಿಕೊಳ್ಳತ್ತವೆ. ಒಂದು ನವೋದಯ ಕಾಲದಲ್ಲಿ ಬೆಳೆದು ಬಂದ ಕತೆ, ಕಾವ್ಯ, ನಾಟಕ, ಕಾದಂಬರಿ ಮುಂತಾದ ಸೃಜನಶೀಲ ಸಾಹಿತ್ಯ, ಇನ್ನೊಂದು ಇಂತಹ ಸೃಜನಶೀಲ ಸಾಹಿತ್ಯವನ್ನು ಮೌಲ್ಯಮಾಪನ ಮಾಡುವ ವಿಮರ್ಶೆ, ಸಂಶೋಧನೆಗಳೆಂಬ ಸೃಜನೇತರ ಸಾಹಿತ್ಯ, ನನ್ನ ಅಧ್ಯಯನ ಸೃಜನೇತರ ಸಾಹಿತ್ಯಗಳಲ್ಲಿ ಒಂದಾದ ವಿಮರ್ಶೆಯನ್ನು ಕುರಿತಾದುದು.

ಇಲ್ಲಿ ನಾವು ಗಮನಿಸಬೇಕಾದ ಮತ್ತೊಂದು ಅಂಶ ಕನ್ನಡ ನವೋದಯ ವಿಮರ್ಶೆ, ಭಾರತೀಯ ಮತ್ತು ಪಾಶ್ಚಾತ್ಯ ವಿಮರ್ಶಾ ಸಿದ್ಧಾಂತಗಳ ಪರಸ್ಪರ ಪ್ರಭಾವ ಸಂವಾದದಿಂದ ರೂಪುಗೊಂಡಿದೆ ಎಂಬುದು. ಪ್ರಭಾವ ಎಂದರೆ ಯಥಾವತ್ತಾಗಿ ಒಂದು ಪರಂಪರೆ ಇನ್ನೊಂದು ಪರಂಪರೆಯಿಂದ ಸ್ವೀಕರಿಸಿ ಅನುಸರಿಸುವುದು ಎಂದು ಅರ್ಥವಲ್ಲ. ಒಂದು ಸಾಹಿತ್ಯ ತನ್ನ ಅವಶ್ಯಕತೆಗಳಿಗನುಗುಣವಾಗಿ ಅನ್ಯ ಪ್ರಭಾವವನ್ನು ಅರಗಿಸಿಕೊಳ್ಳುತ್ತ ತನಗೆ ಪ್ರಸ್ತುತವಾದ ಸಂದಭವನ್ನು ಸೃಷ್ಠಿಸಿಕೊಳ್ಳುತ್ತದೆ. ಉದಾಹರಣೆಗೆ 19ನೇಯ ಶತಮಾನದ ಇಂಗ್ಲಿಷ್ ರೊಮ್ಯಾಂಟಿಸಿಸಮ್ ನವೋದಯದ ಮೇಲೆ ಪ್ರಭಾವ ಬೀರುತ್ತಿದ್ದಾಗಲೇ ಇಂಗ್ಲೇಂಡಿನಲ್ಲಿ ನವ್ಯ ಕಾವ್ಯ ಉಚ್ಛ್ರಾಯ ಸ್ಥಿತಿಗೆ ಬಂದಿತ್ತಾದರೂ ಆಗಿನ ನಮ್ಮ ಸನ್ನಿವೇಶದ ಮೇಲೆ ಇಂಗ್ಲಿಷ್ 'ನವ್ಯ' ಪ್ರಭಾವ ಬೀರಲಿಲ್ಲ. ರೋಮ್ಯಾಂಟಿಕ್ ಕಾವ್ಯ ಪ್ರಭಾವ ಬೀರಿತು. ಹೀಗಾದಾಗಲೇ ಪ್ರಭಾವ ಅರ್ಥಪೂರ್ಣಕವಾಗುವುದು ಹೀಗೆ

ಗುರುತಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ಒಂದು ಹೊಸ ದೃಷ್ಟಿಕೋನ ಸೃಷ್ಟಿಗೊಳ್ಳುತ್ತದೆ. ಇಂತಹ ಒಂದು ಸಂದರ್ಭವು ಕನ್ನಡ ನವೋದಯದಲ್ಲಿ ಉಂಟಾಯಿತು. ಹೀಗಾಗಿ ಕನ್ನಡದಲ್ಲಿ ಕೇವಲ ಅನುಕರಣೆ, ಸ್ವೀಕರಣ ಮಾತ್ರವಲ್ಲ, ಅನೇಕ ಸಂದರ್ಭಗಳಲ್ಲಿ ಮೂಲದ ಪರಿಕಲ್ಪನೆ ಸಂಪೂರ್ಣವಾಗಿ ರೂಪಾಂತರ ಹೊಂದಿ ಪರಿವರ್ತನೆಯಾಗಿ ಬಿಟ್ಟಿರುತ್ತದೆ. ಇನ್ನು ಕೆಲವು ಸಂದರ್ಭದಲ್ಲಿ ಎರಡರ ಮುಖಾಮುಖಿಯಿಂದ ಮೂರನೆಯದು ಹುಟ್ಟಿಕೊಳ್ಳುತ್ತದೆ. ಮತ್ತೆ ಕೆಲವು ಸಂದರ್ಭಗಳಲ್ಲಿ ಪಾಶ್ಚಾತ್ಯ ಪರಿಕಲ್ಪನೆಗಳನ್ನು ನೇರವಾಗಿ ನಮ್ಮ ಸಾಹಿತ್ಯ ಸಂದರ್ಭಕ್ಕೆ ಅನ್ವಯಿಸಿಕೊಳ್ಳಲಾಗುತ್ತದೆ. ಈ ಎಲ್ಲಾ ಪ್ರಕ್ರಿಯೆಗಳೂ ಆಧುನಿಕ ಕನ್ನಡ ಸಾಹಿತ್ಯ ವಿಮರ್ಶೆಯ ಸಂದರ್ಭದಲ್ಲಿ ಕಾಣಬಹುದಾಗಿದೆ.

ಪ್ರಾರಂಭದ ವರ್ಷಗಳ ವಿಮರ್ಶಕರು ಭಾರತೀಯ ಕಾವ್ಯ ಮೀಮಾಂಸೆಯನ್ನು ಕಾವ್ಯದ ಸ್ವರೂಪ, ಅದು ಮನಸ್ಸಿನ ಮೇಲೆ ಪರಿಣಾಮ ಬೀರುವ ರೀತಿ. ಕಾವ್ಯದಲ್ಲಿ ಔಚಿತ್ಯ ಇಂತಹ ವಿಷಯಗಳನ್ನು ಕುರಿತು ಅಭ್ಯಾಸ ಮಾಡಿದ್ದವರು, ಜೊತೆಗೆ ಇಂಗ್ಲಿಷ್ ಭಾಷೆಯಲ್ಲಿನ ಸಾಹಿತ್ಯ ವಿಮರ್ಶೆಯನ್ನು ಓದಿದ್ದವರು. ಇವರು ಮುಖ್ಯವಾಗಿ ಭಾರತೀಯ ಕಾವ್ಯ ಮೀಮಾಂಸೆಯನ್ನು ಅನುಸರಿಸುತ್ತಾರೆ. ಇದಕ್ಕೆ ಪೂರಕವಾಗಿ ಶಿಲ್ಲಿ ಮ್ಯಾಥ್ಯೂ ಅರ್ನಾಲ್ಡ್,ಎ.ಸಿ. ಬ್ರ್ಯಾಡ್ಲೆ ಮೊದಲಾದವರ ಪ್ರತಿಪಾದನೆಗಳನ್ನು ಬಳಸುತ್ತಾರೆ. ಇವರಲ್ಲಿ ಯಾರೂ ಹೊಸ ತತ್ವಗಳನ್ನು ಪ್ರತಿಪಾದಿಸಲಿಲ್ಲ. ಸೃಜನ ಸಾಹಿತ್ಯದ ರಚನೆ ಮೊದಲ ದರ್ಜೆ, ಸಾಹಿತ್ಯ ವಿಮರ್ಶೆ ಎರಡನೆಯ ದರ್ಜೆಯ ಕೆಲಸ ಎಂಬ ಭಾವನೆ ಹೊಂದಿದ್ದರು. ಅನಂತರದಲ್ಲಿ ಅದೇ ಜನ ಒಳ್ಳೆಯ ಸಾಹಿತ್ಯ ವಿಮರ್ಶೆ, ಒಳ್ಳಯ ಸೃಜನ ಸಾಹಿತ್ಯದಷ್ಟೇ ಮೌಲಿಕವಾದದ್ದು ಎಂಬ ನಿರ್ಧಾರಕ್ಕೆ ಬಂದರು. ಹೀಗೆ ಹಂತ-ಹಂತವಾಗಿ ವಿಮರ್ಶೆಯ ಬೆಳವಣಿಗೆ ಆಯಿತು.

ನವೋದಯ ಯುಗದ ಎಲ್ಲಾ ವಿಮರ್ಶಕರಲ್ಲಿ 2 ಅಂಶಗಳು ಕಾಣುತ್ತೇವೆ. ಬರಹಗಾರನ ಸಾಮಾಜಿಕ ಹೊಣೆ ಮತ್ತು ಓದುವವರ ಮನಸ್ವಾಸ್ಥ್ಯದ ಪ್ರಶ್ನೆ ಇವರಲ್ಲಿ ಸದಾ ಎಚ್ಚರವಾಗಿತ್ತು. ಈ ಪ್ರಶ್ನೆಗೆ ಉತ್ತರ ನೀಡುವುದರಲ್ಲಿ ಇವರು ವಾಸ್ತವಿಕತೆಯನ್ನು ಸರಳವಾಗಿ ಕಂಡರು. ಮನೋವಿಜ್ಞಾನ ಮನುಷ್ಯನ ನಾಗರೀಕತೆಯ ಚರಿತ್ರೆ, ಜೀವನದಲ್ಲಿ ಆರ್ಥಿಕ ಪ್ರಶ್ನೆಯ ಮಹತ್ವ ಇವನ್ನು ಸಂಪೂರ್ಣವಾಗಿ ಅಭ್ಯಾಸ ಮಾಡಲಿಲ್ಲವಾದರೂ ಕೃತಿ ರಚನೆ, ಕೃತಿ ವಿಮರ್ಶೆಗಳಲ್ಲಿ ಬರಹಗಾರನ ಹೊಣೆಯನ್ನು ಕುರಿತು ಇವರು ಸದಾ ಎಚ್ಚರದಿಂದಿದ್ದರು. ಎರಡನೆಯದಾಗಿ ಈ ಕಾಲದ ಸಾಹಿತ್ಯದ ವಿಮರ್ಶೆ ಬಹುಮಟ್ಟಿಗೆ ವಿವರಣಾತ್ಮಕವಾದದ್ದು. ಈ ವಿಮರ್ಶಕರು ತಮ್ಮ ಸಂತೋಷವನ್ನು ಓದುಗರೊಂದಿಗೆ ಹಂಚಿಕೊಂಡು ತೃಪ್ತಿಪಟ್ಟರು. ಸೂಕ್ಷ್ಮ ವಿಶ್ಲೇಷಣೆಗೆ ಗಮನ ಕೊಡಲಿಲ್ಲ. ಇದು ನಿಜವಾದರೂ ತಾವು ಬರೆಯುವುದು ಸಾಮಾನ್ಯ ಓದುಗನಿಗೂ ಅರ್ಥವಾಗಬೇಕೆಂಬ ಕಾಳಜಿಯಿಂದ ಬರೆದರು. ಸಾಹಿತ್ಯಕ್ಕೂ, ಸಹೃದಯ ಓದುಗರಿಗೂ ನಡುವೆ ಸೇತುವೆಯಾದರು.

ಪಾಶ್ಚಾತ್ಯರಿಂದ ಪಡೆದ ಹೊಸ ರೂಪಗಳಲ್ಲಿ ಒಂದಾದ ವಿಮರ್ಶೆಯು ಪ್ರಾರಂಭದಲ್ಲಿ ಅಂಬೆಗಾಲಿಡುತ್ತಾದರೂ, ನಿಲ್ಲಲು, ನಡೆಯಲು ಪ್ರಯತ್ನಸಿ ಅನಂತರ ಸ್ವತಂತ್ರವಾಗಿ ನಡೆಯಲು ಕಲಿತಿದ್ದಲ್ಲದೆ ಓಡಲು ಶುರುಮಾಡಿತು. ಕೆಲವರು ವಿಮರ್ಶಾ ಕ್ಷೇತ್ರದಲ್ಲಿಯೇ ಕೆಲಸ ಮಾಡಿದರೆ, ಸ್ವತಃ ಕವಿಗಳಾಗಿದ್ದವರು ವಿಮರ್ಶಕರಾಗಿಯೂ ದುಡಿದರು. ಹೀಗೆ ಸುಮಾರು ಅರ್ಧ ಶತಮಾನಗಳ ಕಾಲ ಬೆಳೆದು ಬಂದ ನವೋದಯ ಕಾಲದ ವಿಮರ್ಶೆಯ ಪ್ರಾತಿನಿಧಿಕ ಕೃತಿಗಳನ್ನು ಕುರಿತು ಒಂದು ಪುಟ್ಟ ಒಳನೋಟ ನೋಡುವುದು ಈ ನಿಬಂಧದ ಉದ್ದೇಶವಾಗಿದೆ.

ನವೋದಯ ಕಾಲದಲ್ಲಿ ಹಲವಾರು ವಿಮರ್ಶಾ ಕೃತಿಗಳು ಪ್ರಕಟವಾಗಿದ್ದರೂ ಅವುಗಳಲ್ಲಿ ಯಾವುದು ಶ್ರೇಷ್ಠ, ಯಾವುದು ಕನಿಷ್ಠ ಎಂಬ ನ್ಯಾಯಿಕ ವಿಮರ್ಶಕ ತೀರ್ಮಾನವನ್ನು ಮಾಡದೆ ಕೇವಲ, ವಿಮರ್ಶಾ ಕೃತಿಗಳ ಮಹತ್ವ ಮತ್ತು ವಿಮರ್ಶಕರ ಧೋರಣೆಗಳನ್ನು ಪ್ರಮುಖವಾಗಿ ತೆಗೆದುಕೊಂಡು ನಿಬಂಧದ ಪುಟಸಂಖ್ಯೆಯ ವ್ಯಾಪ್ತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅಧ್ಯಯನ ಮಾಡಿದ್ದೇನೆ. ಮುಂದೆ ಮಹಾ ಪ್ರಬಂಧದ ಪ್ರಮಾಣದಲ್ಲಿ ಇಂತಹ ಅಧ್ಯಯನ ಕೈಗೊಳ್ಳುವುದಕ್ಕೆ ಸಾಕಷ್ಟು ಮಾಹಿತಿಯಿದೆ. ಈ ಚಿಕ್ಕ ನಿಬಂಧದಲ್ಲಿ ಅಂತಹ ಅಧ್ಯಯನಗಳಿಗೆ ಸಾಧ್ಯವಾಗಬಹುದಾದ ಕೆಲವು ಮಾಹಿತಿಯನ್ನು ಪೂರೈಸಿದ್ದೇನೆ. ಈ ರೀತಿಯ ಅಧ್ಯಯನಗಳ ಮೂಲಕ ಸಾಹಿತ್ಯ ವಲಯಕ್ಕೆ ಹೆಚ್ಚು ಉಪಯೋಗವಾದೀತು. ಕನ್ನಡದಲ್ಲಿ ನೂರಾರು, ಸಾವಿರಾರು ವಿಮರ್ಶಾ ಕೃತಿಗಳು ಬಂದಿದ್ದರೂ ಒಂದು ಕಾಲಘಟ್ಟದಲ್ಲಿ ಅಂದರೆ ನವೋದಯ ಕಾಲದ ವಿಮರ್ಶೆಯನ್ನು ಕುರಿತು ಸಂಕ್ಷಿಪ್ತವಾಗಿ ಅಧ್ಯಯನಕ್ಕೆ ಒಳಪಡಿಸುವುದು ಈ ನಿಬಂಧದ ಉದ್ದೇಶವಾಗಿದೆ.

## ವ್ಯಾಪ್ತಿ :

ಯಾವುದೇ ವಿಷಯ ವಸ್ತುವನ್ನೊಳಗೊಂಡ ಕೃತಿಯಾಗಲೀ, ಕವಿತೆಯಾಗಲೀ, ಅದರದೇ ಆದ ಚೌಕಟ್ಟನ್ನು ಹೊಂದಿರುತ್ತದೆ. ಕಲಾಕೃತಿಯ ಅಚ್ಚುಕಟ್ಟುತನ ಈ ಚೌಕಟ್ಟನ್ನು ಹಾಕಿಕೊಳ್ಳುವುದರ ಮೂಲಕ ಸಾಧ್ಯವಾಗುತ್ತದೆ.

ಪ್ರಸ್ತುತ ನಿಬಂಧಕ್ಕೆ ನಾನು ಆಯ್ಕೆ ಮಾಡಿಕೊಂಡಿರುವ ವಿಷಯ 'ನವೋದಯ ಕಾಲದ ಕನ್ನಡ ವಿಮರ್ಶೆ' ವ್ಯಾಪ್ತಿಯ ದೃಷ್ಟಿಯಿಂದ ತುಂಬಾ ವಿಸ್ತಾರವಾದ ಹರವು ಹೊಂದಿದೆ. ವಿಮರ್ಶೆ ಎಂಬ ಹೊಸ ವಿಧಾನವು ನವೋದಯ ಕಾಲದಲ್ಲಿ ಕಾಣಿಸಿಕೊಂಡಿತು. ಪ್ರಾರಂಭದಲ್ಲಿ ಆಮೆನಡಿಗೆಯಲ್ಲಿ ಸಾಧನೆ ಕಂಡುಬಂದರೂ ಹಂತ ಹಂತವಾಗಿ ಬೆಳೆದು ವಿಮರ್ಶಾ ಪ್ರಸ್ಥಾನಕ್ಕೆ ಒಂದು ಮೆರಗು ಬಂದಿತು. ನವೋದಯ ಕಾಲವನ್ನು ನಾವು ಸುಮಾರು 1900-1950ರ ನಡುವೆ ಗುರುತಿಸುತ್ತೇವೆ. ಅರ್ಧಶತಮಾನದಲ್ಲಿ ಬೆಳೆದಿರುವ ವಿಮರ್ಶೆಯನ್ನೆಲ್ಲಾ ಈ ಒಂದು ಪುಟ್ಟ ಪ್ರಬಂಧದಲ್ಲಿ ನಿರೂಪಿಸಲು ಅಥವಾ ವಿವರಿಸಲು ಸಾಧ್ಯವಿಲ್ಲ. ಪ್ರಬಂಧದ ವ್ಯಾಪ್ತಿಯನ್ನು

ದೃಷ್ಟಿಯಲ್ಲಿಟ್ಟುಕೊಂಡು ನವೋದಯ ಕಾಲದಲ್ಲಿ ಬಂದಂತಹ ಕೆಲವು ವಿಮರ್ಶಕರ ಮತ್ತು ವಿಮರ್ಶಾ ಕೃತಿಗಳಲ್ಲಿ ಪ್ರಾತಿನಿಧಿಕ ಕೃತಿಗಳನ್ನಷ್ಟೇ ಅಧ್ಯಯನಕ್ಕೆ ಆರಿಸಿಕೊಂಡು ನಿಬಂಧವನ್ನು ಬರೆಯುತ್ತಿದ್ದೇನೆ.

## ಸ್ವರೂಪ :

ನಾನು ಆಯ್ಕೆ ಮಾಡಿಕೊಂಡಿರುವ ವಿಷಯ 'ನವೋದಯ ಕಾಲದ ಕನ್ನಡ ವಿಮರ್ಶೆ'. ನವೋದಯ ಕಾಲದ ಪ್ರಾತಿನಿಧಿಕ ಕೃತಿಗಳನ್ನು ವಿಶ್ಲೇಷಿಸುವುದು ಈ ನಿಬಂಧದ ಉದ್ದೇಶವಾಗಿ, ಈ ಪ್ರಬಂಧ ಒಟ್ಟು 5 ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲು ಅಧ್ಯಾಯನದಲ್ಲಿ ನಿಬಂಧದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳ ವಿವರಗಳನ್ನು ಕೊಟ್ಟಿದ್ದೇನೆ.

ನಾನು ನಿಬಂಧಕಕ್ಕೆ ಆಯ್ಕೆ ಮಾಡಿಕೊಂಡಿರುವ ವಿಷಯ, ವಿಮರ್ಶೆಗೆ ಸಂಬಂಧಪಟ್ಟಿರುವುದರಿಂದ ಮೊದಲಿಗೆ ವಿಮರ್ಶೆಯ ಅರ್ಥ, ಅದರ ಸ್ವರೂಪ, ಗುಣಲಕ್ಷಣಗಳು ಮತ್ತು ವಿಮರ್ಶೆಯ ಮತ್ತು ವಿಮರ್ಶಕನ ಕಾರ್ಯಗಳನ್ನು ಕುರಿತಾದ ವಿವರಣೆಯನ್ನು ಎರಡನೆಯ ಅಧ್ಯಾಯನದಲ್ಲಿ ನೀಡಿದ್ದೇನೆ.

ಮೂರನೆಯ ಅಧ್ಯಾಯನದಲ್ಲಿ ನವೋದಯ ಕಾಲದಲ್ಲಿ ಬರುವ ಕೆಲವು ವಿಮರ್ಶಕರ ಪರಿಚಯದೊಂದಿಗೆ ಅವರು ವಿಮರ್ಶಾ ಕ್ಷೇತ್ರದಲ್ಲಿ ಮಾಡಿರುವ ಸಾಧನೆಗಳು ಮತ್ತು ಕೊಟ್ಟಿರುವ ಕೊಡುಗೆಗಳ ಬಗೆಗೆ ವಿವರಿಸಿದ್ದೇನೆ.

ನಾಲ್ಕನೇಯ ಅಧ್ಯಾಯದಲ್ಲಿ ನಿಬಂಧದ ಜೀವಾಳವಾಗಿರುವ ನವೋದಯ ಕಾಲದಲ್ಲಿ ಬಂದಿರುವ ಸಾವಿರಾರು ವಿಮರ್ಶಾ ಕೃತಿಗಳಲ್ಲಿ ಪ್ರಾತಿನಿಧಿಕ ವಿಮರ್ಶೆ ಕೃತಿಗಳನ್ನು ವಿಶ್ಲೇಷಣೆ ಮಾಡಿದ್ದೇವೆ. ನಿಬಂಧದಲ್ಲಿ ಈ ಅಧ್ಯಾಯವು ಸಹಜವಾಗಿಯೇ ದೀರ್ಘವಾಗಿದ್ದು ಕೇಂದ್ರ ಸ್ಥಾನವನ್ನು ಪಡೆದುಕೊಂಡಿದೆ.

ಕೊನೆಯ ಅಧ್ಯಾಯನದಲ್ಲಿ ನವೋದಯ ಕಾಲದಲ್ಲಿ ಬೆಳೆದು ಬಂದ ಕನ್ನಡ ವಿಮರ್ಶೆಯ ಒಟ್ಟು ನೋಟವನ್ನು ಮತ್ತು ಇತಿಮಿತಿಗಳನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದೇನೆ. ಹಾಗೂ ಇಡೀ ನಿಬಂಧದ ಫಲಿತಗಳನ್ನು ಒಳಗೊಂಡ ನಿಬಂಧದ ಉಪಸಂಹಾರವನ್ನು ಮಾಡಿದ್ದೇನೆ.

ನಿಬಂಧದ ಅಂತ್ಯದಲ್ಲಿ ಇಡೀ ನಿಬಂಧ ರಚನೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯಕವಾದ ಪುಸ್ತಕಗಳನ್ನು ಒಳಗೊಂಡ ಪರಮಾರ್ಶನ ಗ್ರಂಥ ಸೂಚಿಯನ್ನು ನೀಡಿವುದರೊಂದಿಗೆ ನಿಬಂಧದ ಎಲ್ಲಾ ಶಿಷ್ಟಾಚಾರಗಳು ಕೊನೆಗೊಂಡು ನಿಬಂಧವನ್ನು ಪರಿಸಮಾಪಿಗೊಳಿಸಿದ್ದೇನೆ.

# ವಿಮರ್ಶೆಯ ಅರ್ಥ, ಸ್ವರೂಪ ಮತ್ತು ಲಕ್ಷಣಗಳು

## ಅರ್ಥ

ತಮ್ಮ ಸುತ್ತಣ ವ್ಯಾಪಾರಗಳಿಗೆ, ಸವಿಗಳಿಗೆ, ಪ್ರತಿಕ್ರಿಯೆಯನ್ನು ತೋರಿಸದೆ ಯಾರು ತಾನೇ ಸುಮ್ಮನಿರುತ್ತಾರೆ. ಪ್ರತಿಯೊಬ್ಬರೂ ತಮಗೆ ಅನಿಸಿದ್ದನ್ನು ಮತ್ತೊಬ್ಬರಿಗೆ ಹೇಳಿಕೊಂಡಂಲ್ಲದೆ ತೃಪ್ತಿಯಿಲ್ಲ. ಈ ಅರ್ಥದಲ್ಲಿ ಎಲ್ಲರೂ ವಿಮರ್ಶಕರೇ. ಈ ಪಲ್ಯಕ್ಕೆ ಉಪ್ಪು ಸಾಲದು, ಈ ಚಟ್ನಿ ಖಾರ, ಸಾರು ತುಂಬಾ ಚೆನ್ನಾಗಿದೆ ಎಂದು ಊಟ ಬಲ್ಲವನು ಹೇಳಿದಾಗ ಅದೂ ಒಂದು ರೀತಿಯಲ್ಲಿ ವಿಮರ್ಶೆಯೇ ಆಗಿದೆ. ಅದೊಂದು ರೀತಿ ರುಚಿವಿವೇಚನೆಯ ನಿರೂಪಣೆ. ಆರೋಗ್ಯವಾದ ನಾಲಿಗೆ, ರುಚಿಯ ಹದವನ್ನು ಬಲ್ಲ ನಾಲಿಗೆ ತಾನು ಸವಿಯಾದ ಆಹಾರದ ರುಚಿ ವಿವೇಚನೆಯನ್ನು ನಿರೂಪಿಸುವಂತೆ, ಆರೋಗ್ಯವಾದ ಮನಸ್ಸು ಅನುಭವದಿಂದ ಪಕ್ವವಾದ ಮನಸ್ಸು ಬದುಕಿನ ಹಂತ-ಹಂತಗಳಲ್ಲಿ ಯಾವುದು ಸರಿ, ಯಾವುದು ಸರಿಯಲ್ಲ. ಯಾವುದ ಚಂದ, ಯಾವುದು ಚಂದವಲ್ಲ, ಯಾವ-ಯಾವ ಅಂಶಗಳ ಹೊಂದಿಕೆಯಿಂದ ಒಂದು ವಸ್ತು ಹಿತವಾಗುತ್ತದೆ ಎನ್ನುವ ವಿವೇಚನೆಯನ್ನು ಮಾಡಬಲ್ಲದು. ಬದುಕಿನ ವ್ಯಾಖ್ಯಾನವಾದ ಸಾಹಿತ್ಯದ ವಿಚಾರದಲ್ಲಿ ಆರೋಗ್ಯವಾದ ಮನಸ್ಸು. ರುಚಿಬಲ್ಲ ನಾಲಿಗೆ ಮಾಡುವ ವಿವೇಚನೆಗೂ ಈ ಮಾತು ಅನ್ವಯಿಸುತ್ತದೆ.

20ನೆಯ ಶತಮಾನದಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವದಿಂದ ಹೊಸ ಪ್ರಕಾರಗಳಾಗಿ ಕನ್ನಡದಲ್ಲಿ ಪಾದಾರ್ಪಣೆ ಮಾಡಿದವುಗಳಲ್ಲಿ ವಿಮರ್ಶೆಯೂ ಒಂದು.ಇಂದು ಕನ್ನಡದಲ್ಲಿ ಇಂಗ್ಲಿಷ್‌ನ ಕ್ರಿಟಿಸಿಸಂ ಶಬ್ದಕ್ಕೆ ಸಂವಾದಿಯಾಗಿ ಬಳಸುತ್ತಿರುವ ಶಬ್ದ ವಿಮರ್ಶೆ. ತೀರಾ ಇತ್ತೀಚೆಗೆ ರೂಢಿಗೆ ಬಂದಿರುವಂತಹುದು, ಸಂಸ್ಕೃತ ಸಾಹಿತ್ಯ ಚರಿತ್ರೆಯಲ್ಲಾಗಲೀ ಪ್ರಾಚೀನ ಕನ್ನಡ ಸಾಹಿತ್ಯದಲ್ಲಾಗಲೀ ವಿಮರ್ಶೆ, ವಿಮರ್ಶಕ ಶಬ್ದಗಳು ನಾವು ಇಂದು ಉಪಯೋಗಿಸುವ ಅರ್ಥದಲ್ಲಿ ಕಂಡುಬರುವುದಿಲ್ಲ. ಅವುಗಳಿಗೆ ಬದಲು ಸಂಸ್ಕೃತ ಕನ್ನಡಗಳೆರಡರಲ್ಲೂ ಬರುವ ಸಹೃದಯ, ಲಾಕ್ಷಣಿಕ ಶಬ್ದಗಳು ಇಂದು ನಾವು ಕ್ರಿಟಿಕ್ (Critic) ಶಬ್ದಕ್ಕೆ ಕೊಡುವ ಅರ್ಥಗಳನ್ನು ಹೊಂದಿದ್ದವು ಮತ್ತು ಕ್ರಿಟಿಸಿಸಂ ಶಬ್ದಕ್ಕೆ ಸಂವಾದಿಯಾಗಿ 'ಕಾವ್ಯಮೀಮಾಂಸೆ' ಶಬ್ದವು ಬಳಕೆಯಲ್ಲಿತ್ತು.

ವಿಮರ್ಶೆ ಎಂಬುದು ಮೃಶ್ ಎಂಬ ಧಾತುವಿನಿಂದ ಬಂದಿದೆ. ಮೃಶ್ ಧಾತುವಿಗೆ 'ವಿ' ಎಂಬ ಉಪಸರ್ಗ ಸೇರಿ ವಿಮರ್ಶೆ ಎಂಬುದಾಗಿದೆ. ಇದರರ್ಥ ಉಜ್ಜಿ ನೋಡು, ತೀಡು, ಒರೆಗೆ ಹಚ್ಚು ಎಂಬುದಾಗಿದೆ. ಇಂಗ್ಲಿಷಿನ 'ಕ್ರಿಟಿಕ್' ಶಬ್ದವು ಗ್ರೀಕ್ ಭಾಷೆಯ ಕ್ರಿಟಿಕೋಸ್ (Critikos) ಶಬ್ದದಂದ ಬಂದಿದೆ. Kritikos ಎಂದರೆ Judge ಮೌಲ್ಯಮಾಪನ, ಗುಣದೋಷ ವಿವೇಚನೆ ಎಂದರ್ಥ. ಈ ಕಾರಣದಿಂದಾಗಿ ವಿಮರ್ಶೆಯೆಂದರೆ

ಕೇವಲ ಮೌಲ್ಯಮಾಪನವೆಂಬ ಭಾವನೆಯು ಸ್ವಾಭಾವಿಕವಾಗಿಯೇ ನಮಗೆ ಬರುತ್ತದೆ. ಆದರೆ ಇಂದು ವಿಶೇಶವಾಗಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಿಮರ್ಶೆಯ ಪರಿಕಲ್ಪನೆ ಸಾಹಿತ್ಯ ಕಲೆಯನ್ನು ಒಳಗೊಂಡಿದೆ. ಅದು ಕೃತಿಸಂಪಾದನಾ ಕಾರ್ಯವಾಗಬಹುದು. ಕೃತಿಯನ್ನು ಕುರಿತು ಬರೆದ ಭಾಷ್ಯ ಅರ್ಥವಿವರಣೆ, ಮೌಲ್ಯಮಾಪನ / ಸಾಹಿತ್ಯ ಸ್ವರೂಪವನ್ನು ಕುರಿತು ಮಾಡುವ ಕಾವ್ಯಮೀಮಾಂಸೆಯಾಗಬಹುದು. ಅಷ್ಟೇ ಅಲ್ಲದೆ ಒಬ್ಬನ ವಿಮರ್ಶೆಯನ್ನು ಅರ್ಥೈಸುವ ಅಥವಾ ಖಂಡಿಸುವ ವಿಮರ್ಶೆಯೂ ಆಗಬಹುದು.

ಇನ್ನೊಂದರ್ಥದಲ್ಲಿ "ವಿಮರ್ಶೆ ಎಂದರೆ ಕವಿಪ್ರತಿಭೆಯಿಂದ ಹೊರಹೊಮ್ಮುವ ಸುಂದರ ಭಾವಮಯ ಕಾವ್ಯಕ್ಷೇತ್ರಗಳಲ್ಲಿ ಸೂಕ್ಷ್ಮಮತಯಾದ ಸಹೃದಯನು ಕೈಗೊಳ್ಳುವ ವಿವಾಹ ಯಾತ್ರೆಗಳು ಅಥವಾ ಸಾಹಸಯಾತ್ರೆಯ ಕಥನ ಕಾರ್ಯ"[೧] ಈ ಕವಿತೆಯ ಅರ್ಥವೇನು ? ಕವಿಯ ಭಾವವೇನು ? ಎಂದು ಹೊರಡುವುದೇ ವಿಮರ್ಶೆಯ ಮೊದಲ ಹೆಜ್ಜೆ. ಎಂದರೆ ಕಾವ್ಯದ ಭಾವ, ಅರ್ಥ, ಉದ್ದೇಶಗಳನ್ನು ವಿಚಾರಪೂರ್ವಕವಾಗಿ ವಿಶ್ಲೇಷಿಸಿ ವಿವೇಚಿಸುವುದೇ ವಿಮರ್ಶೆಯಾಗಿದ್ದು, ಅದು ಸಾಹಿತ್ಯವನ್ನು ಕುರಿತು ವಿವೇಚನೆ. ಇಂಥ ವಿವೇಚನೆಯ ಆರಂಭ ವಿವರಣೆ ವ್ಯಾಖ್ಯಾಗಳಿಂದ ಮತ್ತು ಅದರ ನಿಲುಗಡೆ ಕೃತಿಯ ಮೌಲ್ಯ ನಿರ್ಣಯದಲ್ಲಿ ಸಾಹಿತ್ಯ ಎನ್ನುವುದು ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡ ಜೀವನ ವ್ಯಾಖ್ಯಾನ ಎನ್ನುವುದಾದರೆ, ಸಾಹಿತ್ಯವಿಮರ್ಶೆ ಆ ಜೀವನ ವ್ಯಾಖ್ಯಾಯನದ ವ್ಯಾಖ್ಯಾನ. ಅದೂ ಒಂದು ಕಲೆಯಾಗಿದ್ದು ಸಾಹಿತ್ಯಕ್ಕೆ ಬೆಲೆಕಟ್ಟುವ ಕಲೆ. ಯಾವ ಯಾವ ಕಾರಣಗಳಿಂದಾಗಿ ಒಂದು ಕೃತಿ ಚೆನ್ನಾಗಿದೆ ಅಥವಾ ಚೆನ್ನಾಗಿಲ್ಲ ಎನ್ನುವುದನ್ನು ನಿರ್ಣಯಿಸುವ ಕಲೆ. ಹೀಗೆ ಕೃತಿಯನ್ನು ಬೆಲೆಕಟ್ಟುವ ಪ್ರಯತ್ನ ಬೇರೊಂದು ದೃಷ್ಠಿಯಿಂದ ನೋಡಿದಾಗ ಕೃತಿಯಲ್ಲಿ ಅಂತರ್ಗತವಾಗಿರುವ ಕವಿಯ ಅನುಭವಗಳ ತರ-ತಮದ ವಿವೇಚನೆಯೂ ಆಗಿರಬಹುದು. ಈ ದೃಷ್ಟಿಯಿಂದ ವಿಮರ್ಶೆ ಒಂದು ಅನುಭವಕ್ಕೂ ಮತ್ತೊಂದು ಅನುಭವಕ್ಕೂ ಇರುವ ವ್ಯತ್ಯಾಸಗಳನ್ನು ಗುರುತಿಸಿ ಬೆಲೆ ಕಟ್ಟುವ ಪ್ರಯತ್ನವಾಗಿದೆ. ಈ ಪ್ರಯತ್ನಕ್ಕೆ ಬೇಕಾದುದು ಒಂದು ಬಗೆಯ ಅಂತದೃಷ್ಠಿ. ನಮ್ಮಿಂದ ಭಿನ್ನವಾದ ಅನ್ಯಮನೋಧರ್ಮಗಳನ್ನು ಪ್ರವೇಶಿಸುವ ಸಾಮರ್ಥ್ಯವೇ ವಿಮರ್ಶೆಯ ಸಾರ. ಮ್ಯಾಥ್ಯೂ ಆರ್ನಾಲ್ಡ್‌ನು ಹೇಳಿದಂತೆ "ಜಗತ್ತಿನಲ್ಲಿ ಯಾವ ಯಾವ ಅತ್ಯುತ್ತಮವಾದ ಆಲೋಚನೆ ಹಾಗೂ ಅನುಭವಗಳಿವೆಯೋ ಅವುಗಳನ್ನು ಅರ್ಥಮಾಡಿಕೊಂಡು ಪ್ರಸಾರಮಾಡುವ ಒಂದು ನಿಷ್ಪಕ್ಷಪಾತವಾದ ಪ್ರಯತ್ನವೇ ವಿಮರ್ಶೆ"[೨].

ಒಟ್ಟಿನಲ್ಲಿ ವಿಮರ್ಶೆ, ವಿಶೇಷ, ಕಾವ್ಯ ಸಂಸ್ಕಾರದಿಂದ ಪರಿಷ್ಕೃತನಾದ ಸಹೃದಯನೊಬ್ಬನು ಕಲಾಕೃತಿಯ ಬಗೆಗೆ ಸಂವೇದನೆಗೊಂಡ ಅನುಭವದ ನಿರೂಪಣೆ, ಸಾಹಿತ್ಯದ ಸೊಗಸನ್ನು ಸಹೃದಯರಿಗಾಗಿ ವ್ಯಾಖ್ಯಾನಿಸುವ ಒಂದು ನಿಷ್ಪಕ್ಷಪಾತವಾದ ಪ್ರಯತ್ನ, ಕೃತಿಯ ಗುಣದೋಷಗಳ್ನು ಬೆರಳಿಟ್ಟು ನಿರ್ದೇಶಿಸುವ ಒಂದು

---

೧. ಕುವೆಂಪು : ಕಾವ್ಯವಿಹಾರ: ಉದಯರವಿ ಪ್ರಕಾಶನ :೧೯೯೭ : ಪುಟ :೮೩

೨. ಜಿ.ಎಸ್. ಶಿವರುದ್ರಪ್ಪ : ವಿಮರ್ಶೆಯ ಪೂರ್ವ ಪಶ್ಚಿಮ, ಸಾಹಿತ್ಯ ಬಂಢಾರ ಪ್ರಕಾಶನ, ೨೦೦೪, ಪುಟ ೭.

ಕ್ರಮಬದ್ಧವಾದ ವಿವೇಚನೆ, ಯಾವ ಯಾವ ಕಾರಣಗಳಿಂದ ಒಂದು ಕೃತಿ ಉತ್ತಮವಾಗಿದೆ ಅಥವಾ ಉತ್ತಮವಾಗಿಲ್ಲ ಎನ್ನುವ ಅಭಿಪ್ರಾಯ ಮೌಲ್ಯ ನಿರ್ಣಯ, ಅದೊಂದು ಶಾಸ್ತ್ರವೂ ಹೌದು, ಕಲೆಯೂ ಹೌದು, ಆದರೆ ವಿಮರ್ಶೆ ಆದಷ್ಟು ಪ್ರಾಮಾಣಿಕವಾದ, ನಿಷ್ಪಕ್ಷಪಾತವಾದ ಒಂದು ಪ್ರಯತ್ನವೇ ಹೊರತು, ಕಲಾಕೃತಿಗಳನ್ನು ಕುರಿತು ಕಟ್ಟಕಡೆಯ ತೀರ್ಪು ಎಂದು ಯಾರೂ ಒಪ್ಪಬೇಕಾಗಿಲ್ಲ. ಏಕೆಂದರೆ ಶುದ್ಧ ವಿಮರ್ಶೆ ಅಸಾಧ್ಯವಾದುದು.

## ವಿಮರ್ಶೆಯ ಸ್ವರೂಪ :

ವಿಮರ್ಶೆ ಎಂದರೆ ಸಾಹಿತ್ಯವನ್ನು ಕುರಿತ ತತ್ವ ಮತ್ತು ವಿಶ್ಲೇಷಣಾ ವಿಧಾನ ಎರಡೂ ಸೇರಿರುತ್ತವೆ. ಸಾಹಿತ್ಯದ ಪರಿಕಲ್ಪನೆ ಮತ್ತು ವಿಶ್ಲೇಷಣೆಗಳ ಅಂತರ್ ಸಂದರ್ಭದಲ್ಲಿ ವಿಮರ್ಶೆ ಹುಟ್ಟುತ್ತದೆ. ಸಾಹಿತ್ಯದ ಪರಿಕಲ್ಪನೆಯೆಂದರೆ ಬದುಕಿನ ಪರಿಕಲ್ಪನೆಯೂ ಹೌದು. ವಿಮರ್ಶೆಯ ಕೆಲಸ ಕೇವಲ ಭಾಷೆ-ಶೈಲಿಗಳ ಚರ್ಚೆಯಲ್ಲ. ಸಾಹಿತ್ಯದಲ್ಲಿ ರೂಪುಗೊಳ್ಳುವ ಬದುಕಿನ ವಿವರ ಮತ್ತು ಒಳನೋಟಗಳೂ ಸೇರಿರುವುದರಿಂದ, ಬದುಕಿನ ವಿಶ್ಲೇಷಣೆಯು ವಿಮರ್ಶೆಯ ಅಂತರ್ಗತ ವಿಧಾನವಾಗಿರುತ್ತದೆ. ಸಾಹಿತ್ಯದ ರೂಪು ರೇಷೆಯನ್ನು ಚರ್ಚಿಸುವ ವಿಮರ್ಶೆಯ ಭಾಷೆಯಲ್ಲಿ ಬದುಕಿನ ಸೂಕ್ಷ್ಮಗಳೂ ಸೇರಿರುತ್ತವೆ. ಆದ್ದರಿಂದ ವಿಮರ್ಶೆಯ ಭಾಷೆ ಮತ್ತು ವಿಧಾನಗಳನ್ನು ಸಾಹಿತ್ಯದೊಳಗಿನ ಜೀವನ ವಿವರಣೆಗಳ ಮೂಲಕ ಜೀವನ ದೃಷ್ಟಿ ಧೋರಣೆಗಳನ್ನು ವಿಮರ್ಶಿಸುತ್ತದೆ.

ಕೃತಿಯೊಂದನ್ನು ಕುರಿತು ವಿಚಾರಪೂರ್ವಕವಾಗಿ ವಿಶ್ಲೇಷಿಸಿ ವಿವೇಚಿಸುವುದು ವಿಮರ್ಶೆಯ ಮೊದಲ ಹೆಜ್ಜೆಯಾಗಿದ್ದು. ಈ ಕ್ರಿಯೆ ಬುದ್ಧಿ ಪ್ರಧಾನವಾದದ್ದು. ಇದು ಕಾವ್ಯಾಸ್ವಾದನಗಳಿಂದ ವಿಶಿಷ್ಟವಾದುದು. ಕೃತಿ ನಿರ್ಮಾಣ ಶಕ್ತಿಯೇ ಬೇರೆ, ವಿಮರ್ಶಕನ ಶಕ್ತಿಯೇ ಬೇರೆ, ವಿಮರ್ಶಕನ ಶಕ್ತಿ ಬೇರೆ ಎನಿಸಿಕೊಂಡರೂ ಅದು ಸೃಜನಶಕ್ತಿಯ ಮತ್ತು ಆಸ್ವಾದನ ಶಕ್ತಿಯ ಜೊತೆ ಜೊತೆಗೆ ಕೂಡ ಇರಬಹುದು. ಆದರೆ ಕೆಲವರು ಕಾವ್ಯನಿರ್ಮಾಣ ಶಕ್ತಿಗಿರುವಂತಹ ಸ್ಥಾನವನ್ನೇ ವಿಮರ್ಶೆಗೂ ಕೊಡುವರು. ಮತ್ತೆ ಕೆಲವರು ಕೃತ ನಿರ್ಮಾಣ ಶಕ್ತಿಯೂ ವಿಮರ್ಶಕನ ಶಕ್ತಿಯೂ ಮೂಲತಃ ಬೇರೆ ಬೇರೆ ಅಲ್ಲ ಅವು ಒಂದೇ ಅಖಂಡ ಕ್ರಿಯೆಯ ಎರಡು ಭಾಗಗಳು ಎಂದು ಹೇಳುವರು. ಈ ಹೇಳಿಕೆಗಳಿಂದ ಒಂದೆರಡು ಗಮನಾರ್ಹವಾದ ಮಾತುಗಳು ತಿಳಿಯುತ್ತದೆ. ವಿಮರ್ಶಕನಾದವನು ಪ್ರತಿಭಾವಂತನ ಸೃಷ್ಠಿಯಾದ ಸಾಹಿತ್ಯ ಕೃತಿಯ ಪರಿಶೀಲನೆಗೆ, ವಿವೇಚನೆಗೆ ಹೊರಡುವ ಕಾರಣ ಅವನಲ್ಲಿಯೂ ಪ್ರತಿಭೆ ಇರಬೇಕು. ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸಹೃದಯನಿಗೂ ಪ್ರತಿಭೆ ಇರಬೇಕೆಂದು ಹೇಳಿದೆ. ಈ ಸಹೃದಯನ ಪ್ರತಿಭೆಯನ್ನು ರಾಜಶೇಖರನೆಂಬ ಆಲಂಕಾರಿಕ ಭಾವಯಿತ್ರಿ ಪ್ರತಿಭೆ ಎಂದು ಕರೆದಿದ್ದಾನೆ. ಸಹೃದಯ ಸಮೂಹದಲ್ಲಿರುವ ಅತ್ಯಂತ ಸೂಕ್ಷ್ಮ ಸಂವೇದನಾಶೀಲನಾದ ಯಾರೋ ಒಬ್ಬನು ವಿಮರ್ಶಕನೆನಸಿಕೊಂಡು ಕೃತಿಯೊಂದರ ಪರಿಶೀಲನೆಗೆ ತೊಡಗಿದಾಗ ಆ ಪ್ರತಿಭೆ

ಮೂಲಧನವಾಗುತ್ತದೆ. ಆದರೆ ಆತ ಕವಿಕೃತಿಯ ರಸಾನುಭವವನ್ನು ಸಹೃದಯರಿಗಾಗಿ ವಿಶ್ಲೇಷಿಸಿ ಅನುವಾದಿಸಬೇಕಾದರೆ ಅದೊಂದು ವಿಚಾರಪೂರ್ವಕವಾದ, ವಿಚಾರ ಪ್ರಧಾನವಾದ ವ್ಯಾಪಾರವಾಗುತ್ತದೆ. ವಿಚಾರ, ವಿಶ್ಲೇಷಣೆ, ವಿವೇಚನೆ ಇವುಗಳ ಬುದ್ಧಿ ಪೂರ್ವಕವಾದ ಆವೇಶದ ಕ್ರಿಯೆಗಳಲ್ಲ, ಬದಲಾಗಿ ಬುದ್ಧಿಪೂರ್ವಕವಾದ ವಿವೇಚನೆಯ ಕ್ರಿಯೆ. ಅವನು ಹೊರಟಿರುವುದು ಕೃತಿಯ ವಿಚಾರ ನಿರೂಪಣೆಗೆ ಹೊರತು ಕೃತಿ ನಿರ್ಮಾಣಕ್ಕೆ ಅಲ್ಲ. ತನ್ನ ವಿಮರ್ಶೆಯಿಂದ ಕವಿಯ ರಸಾನುಭವದ ವಿವರಣೆ ಆಗಬೇಕೆಂಬುದು ಆತನ ಗುರಿ. ತನ್ನ ವಿಮರ್ಶೆಯಿಂದ ರಸಾನುಭವನ್ನುಂಟು ಮಾಡಬೇಕೆಂಬುದಲ್ಲ. ರಸಾನುಭವ ಪೂರ್ವಕವಾದ ಸೃಷ್ಠಿ ಆತನ ಗುರಿಯಾದರೆ ಆತ ಕಾವ್ಯವನ್ನು ಬರೆಯಬಹುದೇ ಹೊರತು ವಿಮರ್ಶೆಯನ್ನಲ್ಲ. ವಿಮರ್ಶೆ ಯಾವಾಗಲೂ ಪ್ರಜ್ಞಾಪೂರ್ವಕವಾಗಿ, ಬೌದ್ಧಿಕ ಗುಣ - ದೋಷಗಳನ್ನು ಒಳಗೊಂಡ ಕ್ರಿಯೆ. ಹಾಗೆಂದ ಮಾತ್ರಕ್ಕೆ ವಿಮರ್ಶೆ ಕೇವಲ ಶುಷ್ಕವಾದ, ನಿಷ್ಪಷ್ಟವಾದ ಒಂದು ಬಗೆಯ ತಾರ್ಕಿಕ ಕ್ರಿಯೆ ಎಂದರ್ಥವಲ್ಲ. ವಿಮರ್ಶಕನಲ್ಲಿಯೂ ಕವಿಯಲ್ಲಿರುವಂತೆ ಸೃಜನ ಶೀಲವಾದ ಶಕ್ತಿ ಕಿಂಚಿತ್ತು ಇಲ್ಲವೆಂದು ಕೇವಲ ಬೌದ್ಧಿಕ ಕ್ರಿಯೆಂದು ಅರ್ಥವಲ್ಲ. ಕವಿಯ ಆವೇಶದ ನಡುವೆಯೂ ವಿಮರ್ಶಕ ಶಕ್ತಿ ಇರುತ್ತದೆ. ವಿಮರ್ಶಕನ ವಿಚಾರವಂತಿಕೆಯಲ್ಲಿಯೂ ಸೃಜನಶೀಲತೆ ಇರುತ್ತದೆ. ರಸಜ್ಞನಾದ ಕವಿಹೃದಯವುಳ್ಳ ವಿಮರ್ಶಕನ ವಿಮರ್ಶೆ ಎಷ್ಟೋ ವೇಳೆ ಸಾಹಿತ್ಯಾಸ್ವಾದದಿಂದ ಒದಗುವ ಸುಖವನ್ನು ಕೊಡಬಹುದು. ಆದರೆ ವಿಮರ್ಶನ ಶಕ್ತಿಯೂ ಕೃತಿ ನಿರ್ಮಾಣಶಕ್ತಿಯೂ ಒಂದು ಎಂಬ ರಭಸದಲ್ಲಿ ವಿಮರ್ಶೆ ಪ್ರಧಾನತಃ ಸೃಷ್ಠಿಶೀಲವಾದದ್ದು ಎಂದು ಹೇಳುವುದು ಸರಿ ಅಲ್ಲ. ಕೃತಿ ವಿಮರ್ಶನಾಶಕ್ತಿ ಮತ್ತು ಕೃತಿನಿರ್ಮಾಣಶಕ್ತಿ ಎರಡೂ ಮೂಲತಃ ಬೇರೆ-ಬೇರೆ ಅಲ್ಲದಿರಬಹುದು. ಆದರೆ ಕೃತಿ ನಿರ್ಮಾಣದ ಸ್ವರೂಪವೂ ಕೃತಿ ವಿಮರ್ಶೆಯ ಸ್ವರೂಪವೂ ಬೇರೆ ಬೇರೆ ಎಂದು ಒಪ್ಪಬಹುದು.

ವಿಮರ್ಶೆಯಿಂದ ಕವಿಗೆ, ಕಾವ್ಯಕ್ಕೆ,ಸಹೃದಯ ಸಮಾಜಕ್ಕೆ ಆಗುವ ಪ್ರಯೋಜನ ಅಷ್ಟಿಷ್ಟಲ್ಲ. ಕವಿಯ ದೃಷ್ಠಿಯಿಂದ ನೋಡುವುದಾದರೆ, ವಿಮರ್ಶೆ ಎಷ್ಟೋ ವೇಳೆ ಅವನಿಗೆ ಮಾರ್ಗದರ್ಶನ ಮಾಡಬಹುದು. ವಿಮರ್ಶೆಯಿಂದ ಕವಿಯ ಕಡೆಗೆ ಕೃತಿಯ ಕಡೆಗೆ ಸಹೃದಯರ ಗಮನ ಹರಿದು ಕವಿಯ ಕೀರ್ತಿ ಕಡೆಗೆ ಸಹೃದಯರ ಗಮನ ಹರಿದು ಕವಿಯ ಕೀರ್ತಿ ಹೆಚ್ಚಲು ಕಾರಣವಾಗಬಹುದು. ಸಮರ್ಥನಾದ ವಿಮರ್ಶಕನ ವಿಮರ್ಶೆಯಿಂದ ಕವಿಗೆ ತನ್ನ ಕಾವ್ಯದ ಬೆಲೆ ಅರ್ಥವಾಗಬಹುದು ಅಥವಾ ಕವಿ ತನ್ನ ಕೃತಿಯ ವಿಚಾರದಲ್ಲಿ ಇರಿಸಿಕೊಂಡ ಅನಾವಶ್ಯಕವಾದ, ನಿರಾಧಾರವಾದ ಅತಿಪ್ರಶಂಸೆಯ ಭಾವನೆಯ ನೆರೆ ಒತ್ತಬಹುದು. ವಿಮರ್ಶಕನ ಸಹಾಯದಿಂದ, ಕವಿ ತನ್ನ ಮುಂದಿನ ಕೃತಿಗಳಲ್ಲಿ ತಾನು ಹಿಂದಿನ ಕೃತಿಗಳಲ್ಲಿ ಎಸಗಿದ ದೋಷಗಳನ್ನು ನಿವಾರಿಸಿಕೊಳ್ಳಲು ಪ್ರಯತ್ನಪಡಬಹುದು. ಆದರೆ ವಿಮರ್ಶಕರ ವಿಮರ್ಶೆಯಿಂದ ಮಾರ್ಗದರ್ಶನ ಪಡೆಯಬೇಕಾದರೆ ಕವಿಯಲ್ಲಿ ವಿನಯ, ಔದಾರ್ಯ, ವಿವೇಕ ಬೇಕು. ಈ ಔದಾರ್ಯ, ಈ ವಿವೇಕ ಬಹುಜನ

ಕವಿಗಳಲ್ಲಿ ಕಡಿಮೆ. ಹೀಗಾಗಿ ವಿಮರ್ಶಕರು ಕವಿಯ ಪ್ರತಿಪಕ್ಷ ಎನ್ನುವ ಭಾವನೆ ಹೇಗೋ ಬೆಳೆದುಬಂದಿದೆ. ಈ ಭಾವನೆ ಬಲಿಯುವುದಕ್ಕೆ ಕವಿಗಳು ಕಾರಣರಾದಂತೆ ವಿಮರ್ಶಕರೂ ಕಾರಣರಾಗಿದ್ದಾರೆ. ಪರಸ್ಪರ ಪ್ರತಿಷ್ಠೆಯ ಪ್ರಶ್ನೆ ಬಂದಾಗ ಆಗುವುದು ಹೀಗೆ . ವಿನಯ, ಔದಾರ್ಯ, ವಿವೇಕಗಳ ದಾರಿ ಬೇರೆಯಾಗಿರುತ್ತದೆ.

ಓದುಗರ ದೃಷ್ಟಿಯಿಂದ ನೋಡಿದಾಗ ವಿಮರ್ಶೆ ಒಂದು ರೀತಿಯಲ್ಲಿ ತೋರುದೀಪವಾಗಬಹುದು. ಸಹೃದಯ ತಾವಾಗಿಯೇ ಓದಿದಾಗ ಕಾಣದಿದ್ದ ಹೊಸ ಅಂಶಗಳನ್ನು ಹೊಸ ದೃಷ್ಟಿಯನ್ನು ಅವರು ವಿಮರ್ಶೆಯನ್ನೊಂದಿ ಪಡೆಯಬಹುದು. ವಿಮರ್ಶೆಯಿಂದ ಓದುಗರ ರುಚಿಶುದ್ಧಿಯೂ ಹಾಗೂ ಉತ್ತಮ ಅಭಿರುಚಿಗಳ ನಿರ್ದೇಶಕನವೂ ಆಗುತ್ತದೆ. ಸಹೃದಯರಿಂದ ಒಂದು ಕಡೆ ಅತಿ ಪ್ರಶಂಸೆಗೆ, ಮತ್ತೊಂದು ಕಡೆ ಅವಜ್ಞೆಗೆ ಗುರಿಯಾದ ಕವಿಗಳನ್ನೂ ಕವಿಕೃತಿಗಳನ್ನೂ ವಿಮರ್ಶೆ ತನ್ನ ತಕ್ಕಡಿಯಲ್ಲಿ ತೂಗಿ ಸರಿಯಾದ ಬೆಲೆಯನ್ನು ನಿರ್ಣಯಿಸಿ ಸಹೃದಯ ಸಮಾಜದ ಕಣ್ಣನ್ನು ತೆರೆಯಿಸಬಹುದು.

ವಿಮರ್ಶೆ ಒಂದು ರೀತಿಯಲ್ಲಿ ಸಾಹಸ. ಆದರೆ ಅತ್ಯಂತ ಜವಾಬ್ದಾರಿಯುತವಾದ ಕೆಲಸ, ಇದರಿಂದ ವಿಮರ್ಶಕನಿಗೆ ಕೀರ್ತಿ ಬರಬಹುದು. ಇಲ್ಲವೆ ಅಪಕೀರ್ತಿ ಬರಬಹುದು. ಆತನ ಬುದ್ಧಿಗೆ ಇದೊಂದು ಒರೆಗಲ್ಲು. ವಿಮರ್ಶೆ ಮಾಡುತ್ತಾ ಮಾಡುತ್ತಾ ಆತನ ವಿಚಾರಶಕ್ತಿ ಹರಿತವಾಗುತ್ತದೆ, ಕಣ್ಣು ಸೂಕ್ಷ್ಮವಾಗುತ್ತದೆ. ರಸಾನುಭವ ಶಕ್ತಿ ವರ್ದಿಸುತ್ತದೆ. ಒಟ್ಟನಲ್ಲಿ ಇದೊಂದು ಬಗೆಯ ವ್ಯಾಯಾಮ ಆತನ ಆಲೋಚನಾಶಕ್ತಿಗೆ ಎಲ್ಲಕ್ಕೂ ಮಿಗಿಲಾಗಿ ಕಸ-ರಸಗಳನ್ನು ಬೇರ್ಪಡಿಸಿದ ಕೃತ ಕೃತ್ಯತೆಯ ಭಾವವೇ ಆತನಿಗೆ ಲಭಿಸುವ ಅಂತಿಮ ಪ್ರಯೋಜನವೆನ್ನಬಹುದು.

## ವಿಮರ್ಶೆಯ ಮತ್ತು ವಿಮರ್ಶಕನ ಗುಣಲಕ್ಷಣಗಳು

ವಿಮರ್ಶೆಯೆನ್ನುವುದು ಜಗತ್ತಿನಲ್ಲಿ ಎಲ್ಲಾ ಕ್ಷೇತ್ರಗಳಲ್ಲಿಯೂ ಸ್ವಾಭಾವಿಕವಾಗಿ ನಡೆಯುತ್ತಿರುತ್ತದೆ. ಜನಸಾಮಾನ್ಯರೂ ಒಂದು ಸುಂದರ ವಸ್ತುವನ್ನು ಕಂಡಾಗ ಸುಂದರವಿದೆ ಎನ್ನುವರು. ಕುರೂಪಿಯನ್ನು ಕಂಡರೆ ಮೂಗು ಮುರಿಯುವರು. ಈ ಗುಣ ದೋಷಗಳ ಅಭಿವ್ಯಕ್ತಿಯು ಯಾರಲ್ಲಿಯೂ ಪೂರ್ಣ ಶುದ್ಧವಾಗಿರುವುದಿಲ್ಲ. ಆ ವ್ಯಕ್ತಿಗಳ ಪೂರ್ಣ ಸಂಸ್ಕಾರದ ಮೇಲೆ ಅವರ ಅಭಿರುಚಿ ಅಭಿಪ್ರಾಯಗಳು ರೂಪುಗೊಂಡಿರುತ್ತದೆ. ಇದಕ್ಕೆ ಕಲಾ ವಿಮರ್ಶಕನೂ ಹೊರತೇನಲ್ಲ. ಕಲೆಗಾರನಿಗೆ ಹೀಗೆ ಪೂರ್ವ ಸಂಸ್ಕಾರದ ಪ್ರಭಾವದಿಂದ ಕಲಾದೃಷ್ಟಿಯು ನಿರ್ಮಾಣವಾಗಿರುತ್ತದೋ, ಹಾಗೆಯೇ ವಿಮರ್ಶಕನಿಗೂ ಒಂದು ದೃಷ್ಟಿಕೋನವು ರೂಪುಗೊಂಡಿರುತ್ತದೆ. ಇಂಥ ದೃಷ್ಟಿಕೋನಗಳು ಕಲಾವಿದನಲ್ಲಿಯೂ, ವಿಮರ್ಶಕನಲ್ಲಿಯೂ ಪರಸ್ಪರ ವಿರುದ್ಧವು ಇರಬಹುದಾಗಿದೆ. ಅಂಥ ವಿಮರ್ಶಕನು ಕೂಡ ಕಲೆಯ ಆನಂದವನ್ನು ಪರಿಶುದ್ಧ ರೀತಿಯಲ್ಲಿ ಅನುಭವಿಸಲಿಕ್ಕೆ ಅಭ್ಯಾಸವನ್ನು ಹೊಂದಿರಬೇಕಾಗುತ್ತದೆ. ಆದುದರಿಂದ ಭಿನ್ನ ರುಚಿ, ಭಿನ್ನ ಸಂಸ್ಕೃತಿಗಳುಳ್ಳ ಕಲಾವಿದನ ಕಲಾಕೃತಿಯನ್ನು ಸರಿಯಾಗಿ ವಿಮರ್ಶಿಸಲಿಕ್ಕೆ ಇವನು ತಕ್ಕವನಾಗುತ್ತಾನೆ.

ವಿಮರ್ಶಕ ಉತ್ತಮ ವಿಮರ್ಶಕನಾಗಬೇಕಾದರೆ ಅವನೂ ಕವಿಯಾಗಿರಬೇಕಾಗಿಲ್ಲ. ಆತ ಮೊದಲು ಉತ್ತಮನಾದ 'ಸಹೃದಯ'ನಾದರೆ ಸಾಕು. ವಿರ್ಮಶಕನೆಂದರೆಸಹೃದಯ ಸಮೂಹದಲ್ಲಿಯೇ, ಹೆಚ್ಚಿನ ತಿಳಿವನ್ನೂ, ಸೂಕ್ಷ್ಮ ದೃಷ್ಟಿಯನ್ನೂ ಉಳ್ಳವನು. ಕವಿಯೇರಿದೆತ್ತರಕ್ಕೆ ಏರಿ, ಕವಿ ಮುಳುಗಿದಾಳಕ್ಕೆ ಮುಳುಗಿ ಕೃತಿಯ ಸೊಗಸನ್ನು ವ್ಯಾಖ್ಯಾನಿಸಿ ತೋರುವವನು ಅದಕ್ಕೆ ಬೇಕಾದದ್ದು ಸಮರ್ಪಕವಾದ ಸಹೃದಯತೆ. ಏಕೆಂದರೆ ವಿಮರ್ಶೆಯಲ್ಲಿ. "ಮೊದಲು ಆಸ್ವಾದ, ಆನಂತರ ವಿಮರ್ಶೆ, ಈ ವಿಮರ್ಶನ ಶಕ್ತಿ ರಸಾನುಭವದ ಜೊತೆಯಲ್ಲಿಯೇ ಬೆಳೆಯತಕ್ಕದ್ದು ವಿಮರ್ಶಕ ದಿವ್ಯ ಸ್ಫೂರ್ತಿಗೆ ವಶನಾದವನೆಂದಾಗಲಿ ಅಥವಾ ಕೇವಲ ಪರೋಪಜೀವಿ ಎಂದಾಗಲಿ ತಿಳಿಯಬಾರದು. ಅವನೂ ನಮ್ಮಂತೆ ಒಬ್ಬ ಸಹೃದಯ. ತಾನು ಓದಿದ್ದರಲ್ಲಿ ಹಲವು ರುಚಿಸಿದ್ದು ಏಕೆ ಮತ್ತೆ ಹಲವು ರುಚಿಸಲಿಲ್ಲವೇಕೆ ಎನ್ನುವ ಪ್ರಶ್ನೆಗಳನ್ನು ಕಂಡುಕೊಂಡವನು."[3] ಈ ಬಗೆಯ ಪ್ರಶ್ನೆಗಳು ಹೇಳಬೇಕಾದರೆ ಅವನು ಆಸ್ವಾದನಾಶಕ್ತಿ ಸಮರ್ಪಕವಾಗಿರಬೇಕು. ಒಂದು ಉತ್ತಮ ಕೃತಿಯ ಅನುಭವವನ್ನು ವಿಶ್ಲೇಷಿಸಬೇಕಾದರೆ ಆತ ಅದರ ಸೊಗಸನ್ನು ಮೊದಲು ಆಸ್ವಾದಿಸಬಲ್ಲವನಾಗಿರಬೇಕು. ತನ್ನ ಅಭಿರುಚಿ ಸಮರ್ಪಕವಾಗಿದೆ ಎನ್ನುವ ಬಗೆಗೆ ಓದುಗರಲ್ಲಿ ವಿಶ್ವಾಸವನ್ನುಂಟು ಮಾಡಬೇಕು. ಆತ ಹಾಗೆ ಓದುಗರಲ್ಲಿ ನಂಬುಗೆಯನ್ನುಂಟು ಮಾಡಬೇಕಾದರೆ ವಿಶೇಷವಾದ ಕಾವ್ಯಾಭ್ಯಾಸದ ಪರಿಣತಿ ಆತನಿಗೆ ಅಗತ್ಯ. ಈ ಕಾವ್ಯ ಸಂಸ್ಕಾರ ಎನ್ನುವುದು ಕೃತಿಗಳ ಅಧ್ಯಯನದ ಅನುಭವವನ್ನು ಅಳವಡಿಸಿಕೊಳ್ಳುವ ರೀತಿಯಾಗಿದೆ. ವಿಮರ್ಶಕ ಶಕ್ತಿ ವಿಶೇಷ ಪ್ರಯತ್ನದ ಪರಿಣಾಮವೇ ಹೊರೆತು ಸುಮ್ಮನೆ ಕೂತಲ್ಲಿಗೆ ಇಳಿದು ಬಂದುದಲ್ಲ.

ಕೃತಿಯ ರಸಾನುಭವವನ್ನು ತನ್ನ ಬುದ್ಧಿಯ ಮೂಲಕ ವಿಶ್ಲೇಷಿಸಿ ಕೊಡುವ ಮುನ್ನ ವಿಮರ್ಶಕನು ಕವಿಕೃತಿಯ ಅನುಭವವನ್ನು ತನ್ನಲ್ಲಿ ಪುನಃ ಸೃಷ್ಟಿಸಿಕೊಳ್ಳಬೇಕು. ಕೃತಿ ನಿರ್ಮಾಣ ಒಂದು ಬಗೆಯ ಸೃಷ್ಟಿ ಕಾರ್ಯವೇ. ಇದಕ್ಕೆ ವಿಮರ್ಶಕನಿಗೆ ಸೂಕ್ಷ್ಮದೃಷ್ಟಿ ಬೇಕು. ಕಲ್ಪನಾ ಶಕ್ತಿ ಬೇಕು. ಆಗ ಮಾತ್ರವೇ ಕವಿಯ ಕೃತಿಯ ಆತ್ಮವನ್ನರಿಯಲು ಆತನಿಗೆ ಸಾಧ್ಯವಾಗುತ್ತದೆ. ಕೃತಿಯ ಉದ್ದೇಶವೇನು, ಕೃತಿಯಲ್ಲಿ ಕವಿ ನಿರ್ವಹಿಸಿರುವುದೇನು ಎಂಬುದನ್ನು ಗುರುತಿಸಲು ಗ್ರಹಿಸಲು ವಿಮರ್ಶಕ ಶ್ರಮಿಸಬೇಕು. ಕವಿಕೃತಿಯ ಆತ್ಮವನ್ನು ಒಳಹೊಕ್ಕು ನೋಡಿ ಕವಿಯ ಭಾವವನ್ನು ವರ್ಣಿಸಲು ಸಮರ್ಥನಾಗಬೇಕು. ಇದಕ್ಕೆ ಕಲ್ಪನಾಶಕ್ತಿ ಅಗತ್ಯ. ಅಷ್ಟೆಲ್ಲ ಕೃತಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ ಅದು ರಚಿತವಾದ ಸನ್ನಿವೇಶ, ಅದರ ರಚನೆಗೆ ಪ್ರಚೋದಕವಾದ ಪರಿಸರದ ಪ್ರಭಾವ, ಕವಿಯ ವ್ಯಕ್ತಿತ್ವದ ವಿಕಾಸ ಇವುಗಳನ್ನು ವಿಶದಪಡಿಸಬೇಕಾದರೆ, ಕಲ್ಪನಾಶಕ್ತಿಯೊಂದಿಗೆ ಸರಿಯಾದ ವಿಚಾರಶಕ್ತಿಯೂ ನೆರವಾಗಬೇಕಾಗುತ್ತದೆ.

ಕುತೂಹಲ ಮತ್ತು ಜಿಜ್ಞಾಸೆಯ ಮನೋಭಾವ ವಿಮರ್ಶಕನಲ್ಲಿ ಪ್ರಧಾನವಾಗಿರಬೇಕು. ಇದರ ಜೊತೆಗೆ

---

೩. ಜಿ.ಎಸ್. ಶಿವರುದ್ರಪ್ಪ : ವಿಮರ್ಶೆಯ ಪೂರ್ವ ಪಶ್ಚಿಮ, ಸಾಹಿತ್ಯ ಭಂಡಾರ ಪ್ರಕಾಶನ, ೨೦೦೪, ಪುಟ ೧೪.

ತಾನು ವಿಮರ್ಶಿಸುವ ಕೃತಿಯ ಬಗೆಗೆ ಅಪಾರವಾದ ಸಹಾನುಭೂತಿ ಇರಬೇಕು. ವಿಮರ್ಶೆ ಮೂಲತಃ ತನ್ನದಲ್ಲದ ಭಿನ್ನಮನೋಧರ್ಮಗಳನ್ನು ಒಳಹೊಕ್ಕು ನೋಡುವ ಪ್ರಯತ್ನವಾಗಿದೆ. ಇನ್ನೊಬ್ಬನ ಮನಸ್ಸನ್ನು ಗ್ರಹಿಸಬೇಕಾದರೆ, ಮೊದಲು ಅದರ ಹಿನ್ನಲೆಯನ್ನು ಸಹಿಸಬೇಕು. ಸ್ವಯಂಪ್ರತಿಷ್ಠೆಗಿಂತ ಕೃತಿಯಲ್ಲಿ ತನ್ಮಯವಾಗುವಿಕೆ, ವಿಶ್ಲೇಷಣೆ ಮುಖ್ಯವಾಗಿಸಿಕೊಳ್ಳಬೇಕು. ಅದಕ್ಕಾಗಿ ಸಹಾನುಭೂತಿ ಅಗತ್ಯವಾಗಿದೆ.

ಕಾವ್ಯ ನಿರ್ಮಾಣಕ್ಕೆ, ಕಾರಣಗಳನ್ನು ಹೇಳುವಾಗು ನಮ್ಮ ಅಂಲಕಾರಿಕರು 'ಚಿತ್ತಸ್ವಾಸ್ಥ್ಯವನ್ನು ಹೇಳುತ್ತಾರೆ. ಸ್ವಾಸ್ಥ್ಯ ಎಂದರೆ ದೇಹ ಮತ್ತು ಮನಸ್ಸುಗಳ ಸ್ವಸ್ಥತೆ, ವಿಮರ್ಶಕನಿಗೂ ಇದು ಮೊಟ್ಟ ಮೊದಲನೆಯದಾಗಿ ಇರಬೇಕಾದ ಗುಣಲಕ್ಷಣ. ವೈದ್ಯ ಹೇಗೆ ದೇಹದ ಆರೋಗ್ಯದ ಬಗ್ಗೆ ಆಸಕ್ತನೋ ಹಾಗೆಯೇ ವಿಮರ್ಶಕ ಸಹೃದಯರ ಮನಸ್ಸಿನ ಬಗ್ಗೆ ಆಸಕ್ತನಾಗಿದ್ದಾನೆ. ಮನಸ್ಸು ಆರೋಗ್ಯದಿಂದಿದ್ದಾಗ ಮಾತ್ರ ರುಚಿಯನ್ನು ಗ್ರಹಿಸಲು ಮತ್ತು ಬೆಲೆಯನ್ನು ಕಟ್ಟಲು ಸಾಧ್ಯ. ವಿಮರ್ಶಕ ಮಾನಸಿಕವಾಗಿ ಚುರುಕಾಗಿದ್ದಾಗ ಮಾತ್ರ ಕೃತಿಯ ಸಾರವನ್ನು ಗ್ರಹಿಸಲು ಶಕ್ತನಾಗಿರುತ್ತಾನೆ. ಆದರೆ ವಿಮರ್ಶಕನ ಮನಸ್ಸು ಸ್ವಾಸ್ಯವನ್ನು ಕೆಡಿಸಬಲ್ಲ ಪ್ರಬಲ ಶಕ್ತಿ ಎಂದರೆ ಪೂರ್ವಾಗ್ರಹ. ಹಿಂದೆ ಹೇಳಿದ ಸಮಸ್ತ ಲಕ್ಷಣಗಳನ್ನೂ ನುಂಗಿ ನೊಣೆಯುವ ಗ್ರಹ ಇದು. ತನ್ನ ಮನಸ್ಸಿನ ಆರೋಗ್ಯವನ್ನು ಕಾಪಾಡಿಕೊಳ್ಳುವ ವಿಮರ್ಶಕ ಪೂರ್ವಗ್ರಹಗಳಿಂದ ದೂರವಾಗಿರಬೇಕು. ಒಂದು ಬಗೆಯ ಪಕ್ಷಪಾತ ಮತ್ತು ಪೂರ್ವಾಗ್ರಹಗಳು ಒಂದಲ್ಲ ಒಂದು ರೀತಿಯಲ್ಲಿ ವಿಮರ್ಶಕನನ್ನು ಆವರಿಸಿಬಿಡುತ್ತವೆ. ತಾನು ಕಲಿತ ಶಿಕ್ಷಣ, ಸೇರಿದ ಪಂಥ, ತನ್ನ ಜಾತಿ, ಮತ, ಕಡೆಗೆ ರಾಷ್ಟ್ರಕ್ಕೆ ಸಂಬಂಧಿಸಿದ ಪಕ್ಷಪಾತಗಳು ವಿಮರ್ಶಕನಲ್ಲಿ ಸೇರಿಕೊಂಡಿರುವುದುಂಟು. ಇಂಥ ಪಕ್ಷಪಾತಗಳಿಂದ ವಿಮರ್ಶೆ ತಪ್ಪು ದಾರಿ ತುಳಿದಿರುವ ನಿದರ್ಶನಗಳು ನಮ್ಮಲ್ಲಿವೆ. ಆದ್ದರಿಂದ ವಿಮರ್ಶಕ ನಿರ್ಲಿಪ್ತ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ವಿಮರ್ಶಕನಿಗೆ ನಿಷ್ಪಕ್ಷಪಾತವಾದ ಮನೋಭಾವವನ್ನು ಬೆಳೆಸಿಕೊಡುವಷ್ಟು ಆತನ ವಿಮರ್ಶೆ ಬೆಲೆಯುಳ್ಳದ್ದಾಗಿರುತ್ತದೆ.

ಒಟ್ಟಾರೆಯಾಗಿ ಆದರ್ಶ ವಿಮರ್ಶಕನ ಲಕ್ಷಣಗಳನ್ನು ಹೇಳುವುದಾದರೆ ಕಲ್ಪನಾಶಕ್ತಿ, ಅಂತರ್‌ದೃಷ್ಠಿ, ಸಹಾನುಭೂತಿ, ವಿದ್ವತ್ತು, ಜೀವನಾನುಭವ, ರೀತಿ-ತಂತ್ರಗಳನ್ನು ಗುರುತಿಸಿ ಮೆಚ್ಚುವ ಸಾಮರ್ಥ್ಯ, ವಿಶ್ಲೇಷಣಾಶಕ್ತಿ, ಪೂರ್ವಾಗ್ರಹ ವಿಮುಕ್ತಿ, ಉದಾರತೆ, ವ್ಯಾಖ್ಯಾನ, ಕೌಶಲ ಇವು ಉತ್ತಮ ವಿಮರ್ಶಕನಿಗಿರಬೇಕಾದ ಯೋಗ್ಯತೆಗಳಾಗಿವೆ. ಆದರೆ ಈ ಎಲ್ಲಾ ಗುಣಗಳನ್ನು ಅಳವಡಿಸಿಕೊಂಡ ಆದರ್ಶ ವಿಮರ್ಶಕ ಸಿಗುವುದು ಅಪೂರ್ವ.

## ವಿಮರ್ಶಕನ ವ್ಯಕ್ತಿತ್ವ :

ವಿಮರ್ಶೆಯಲ್ಲಿ ವಿಮರ್ಶಕನ ವ್ಯಕ್ತಿತ್ವಕ್ಕೆ ಬೆಲೆಯಿಲ್ಲ ಎಂದು ಭಾವಿಸಬಾರದು. ಕಲೆಯನ್ನು ಕಂಡು,

ಅದನ್ನು ಅನುಭವಿಸಿ, ಸೌಂದರ್ಯವನ್ನು ಅರಿತು, ಅದನ್ನು ವಿವೇಚಿಸಿ ವಿಶ್ಲೇಷಿಸುವ ಶಕ್ತಿ, ಸಾಮರ್ಥ್ಯ, ಶೈಲಿಗಳಲ್ಲಿ ಅವನ (ವಿಮರ್ಶಕನ) ವ್ಯಕ್ತಿತ್ವದಿಂದ ವ್ಯಕ್ತವಾಗುತ್ತದೆ. ಆದರೆ ಒಂದು ಕಲಾವಸ್ತುವಿನ ಸಂಪೂರ್ಣ ಸೌಂದರ್ಯವನ್ನು ಒಬ್ಬ ವಿಮರ್ಶಕ ಅನುಭವಿಸಲು ಸಾಧ್ಯ ಎಂದು ಹೇಳಲಾಗದು. ಅವನು ಅರಿತುಕೊಂಡಷ್ಟು ಕಲೆಯ ಚೆಲುವಿನಿಂದ ಉಂಟಾಗುವಷ್ಟು ಆನಂದವನ್ನು ಮಾತ್ರ ಹೊಂದಲು ಪಾತ್ರನಾಗುತ್ತಾನೆ. ಈ ಪಾತ್ರ ಅವನ ವಿಮರ್ಶೆಯಲ್ಲಿ ವ್ಯಕ್ತವಾಗುತ್ತದೆ. ಇದು ವಿಮರ್ಶೆಯಲ್ಲಿ ಮೂಡಿಬರಲು ಅವನ ವ್ಯಕ್ತಿತ್ವದ ಚಿತ್ರವಾಗುತ್ತದೆ. ಈ ವ್ಯಕ್ತಿತ್ವವು ಅಲ್ಪಮಟ್ಟದ್ದಾದರೆ, ವಿಮರ್ಶೆಯೂ ಅಲ್ಪಮಟ್ಟದ್ದಾಗಿರುತ್ತದೆ. ವಿಮರ್ಶಕನ ಅಭ್ಯಾಸ ಅಭಿರುಚಿಗಳು ಸದೋಷವಾಗಿದ್ದರೆ ವಿಮರ್ಶೆಯಲ್ಲಿಯೂ ಹಾಗೇ ಇರುತ್ತದೆ. ಇದಕ್ಕೆ ನಿದರ್ಶನವಾಗಿ ರಾಮಾಯಣ, ಮಹಾಭಾರತ, ಶಾಕುಂತಲ ಮೊದಲಾದ ಕಲಾಕೃತಿಗಳ ವಿಮರ್ಶೆಗಳು ಕಾಲ ಕಾಲಕ್ಕೆ, ವಿವಿಧ ವ್ಯಕ್ತಿಗಳಿಂದ ನಡೆಯುತ್ತಾ ಬಂದುದನ್ನು ನೋಡಬಹುದು. ಆ ವಿಮರ್ಶಕರಾರೂ ಆ ಮಹಾಕಾವ್ಯಗಳ ಸೌಂದರ್ಯವನ್ನು ಸಂಪೂರ್ಣವಾಗಿ ಕಂಡಿದ್ದೇವೆಂದು ಹೇಳಿಕೊಳ್ಳುವ ಸಾಹಸಕ್ಕೆ ಹೋಗುವುದಿಲ್ಲ. ನಿಜವಾದ ವಿಮರ್ಶೆ ಹಾಗೆ ಹೇಳುವುದೂ ಇಲ್ಲ. ಮಹಾಕವಿಯ ಸಹೃದಯ ಆಳ-ಅಗಲಗಳನ್ನೆಲ್ಲ ಕಂಡನೆನ್ನುವ ಎದೆಗಾರಿಕೆಯು ಯಾವ ಒಬ್ಬ ವಿಮರ್ಶಕನಿಗೂ ಇರಲಾರದು. ಕವಿಗೆ ಕಲಾವಿದನಿಗೆ ವಿಶ್ವಸತ್ಯವು ಹೇಗೋ ಹಾಗೆ ವಿಮರ್ಶಕನಿಗೆ ಕಲಾನಂದ, ಸತ್ಯಗಳು ಅಪೂರ್ಣವಾಗಿಯೇ ಉಳಿಯುವುವು. ಯಾವ ವಿಮರ್ಶಕನ ಸಮರ್ಥವಾದ ನೋಟವು ಕಲಾನಂದವನ್ನು ಎಷ್ಟು ಆಳವಾಗಿ ಕೃತಿಯ ಹೃದಯ ಒಳಹೊಕ್ಕು ಅನುಭವಿಸಲು ಪ್ರಯತ್ನಿಸುವುದೋ, ಆ ಪ್ರಯತ್ನದ ಉಚ್ಚ ನೀಚ ತರಗತಿಗಳ ಮೇಲೆ ಅವನ ವ್ಯಕ್ತಿತ್ವವು ನಿಲ್ಲುವುದು, ವಿಮರ್ಶೆಯಲ್ಲಿ ವಿಮರ್ಶಕನ ವ್ಯಕ್ತಿತ್ವವೆಂಬುದು ಇದೇ ಆಗಿದೆ.

ವಿಮರ್ಶಕನ ವ್ಯಕ್ತಿತ್ವದಿಂದ ವಿಮರ್ಶೆಗಳಲ್ಲಿ ಅನೇಕ ತರಗತಿಗಳುಂಟಾಗುತ್ತದೆ. ಸಾಹಿತ್ಯವೆಂಬುದು ಒಂದು ಮಹಾಸಾಗರ ಇದ್ದಂತೆ. ಅದರ ತೀರದಲ್ಲಿ ನಿಂತು, ಅದರ ತೆರೆಗಳ ಓಟದ ಭವ್ಯತೆ, ವಿಶಾಲತೆ, ನೀಲವರ್ಣದ ಮನೋಹರತೆಗಳನ್ನು ಕಂಡು, ಎಲ್ಲರಂತೆ ಸಂತಸಗೊಂಡು ವಿವರಿಸಿ ವಿಮರ್ಶಿಸಿದೇವೆಂದು ಭಾವಿಸುವ ವರ್ಗವೂ ಒಂದಿದೆ. ಇಂಥವರ ವಿಮರ್ಶೆ ಸಾಮಾನ್ಯ ಸ್ವರೂಪದ್ದಾಗಿರುವುದು. ಈ ಹೊರ ನೋಟದಲ್ಲಿ ಅಲ್ಲಿ - ಲ್ಲಿ ಕಂಡ ಪಾಚಿಯನ್ನೋ ಹೊಲಸು ನೊರೆಯನ್ನೋ ಎತ್ತಿ ತೋರಿಸಿ, ಸಾಹಿತ್ಯ ಸಾಗರದ ವಿಮರ್ಶೆಯನ್ನು ಮಾಡಿದೆವೆಂದು ಸಮಾಧಾನವನ್ನೂ ಹೊಂದುವುದುಂಟು. ಇಂತಹವರ ವಿಮರ್ಶೆಗಳು ದೋಷದಿಂದ ಕೂಡಿದವುಗಳಾಗಿರುತ್ತದೆ. ಕಲೆಯ ಮಹತಿಯು ಅದರ ನೋಟದಲ್ಲಿ ಮಾತ್ರ ಇರಲಾರದು. ಉತ್ತಮವಾದ ಮುತ್ತುಗಳು ಸಮುದ್ರದ ತಳದಲ್ಲಿ ರೂಪುಗೊಂಡಿರುತ್ತವೆ. ಸಾಹಿತ್ಯವಂಬ ಸಾಗರದ ಆಳದಲ್ಲಿರುವ ಕಲಾನಂದವನ್ನು ಕಂಡು, ಅನುಭವಿಸಿ, ಮೇಲೆ ತಂದು, ಲೋಕಕ್ಕೆ ತಿಳಿಸುವ ಸಾಮರ್ಥ್ಯಗಳು ವಿಮರ್ಶಕನಿಗೆ ಬೇಕಾಗುತ್ತದೆ. ಕಲಾಭ್ಯಾಸಕ್ಕೆ ಬೇಕಾಗುವ ಸತತ ಪ್ರಯತ್ನಗಳು ಆತನ ತಾಳ್ಮೆಯಿಂದ ಬರಬೇಕು. ಇಂತಹ

ತಾಳ್ಮೆ, ಸಾಮರ್ಥ್ಯಗಳನ್ನು ವಿಮರ್ಶಕ ಹೊಂದಿರುತ್ತಾನೆ. ಈ ರೀತಿಯ ವಿಮರ್ಶೆಗೆ ಸಾಹಿತ್ಯ ಪ್ರಪಂಚದಲ್ಲಿ ಮೂಲ ಕೃತಿಯಷ್ಟೇ ಮಹತ್ವದ ಸ್ಥಾನವಿರುತ್ತದೆ.

ವಿಮರ್ಶೆಗೆ ಈ ಮಹತಿಯು ಲಭಿಸಬೇಕಾದರೆ ಅದು ಸಾಹಿತ್ಯದ ಸಫಲತೆಯನ್ನು ಬಿತ್ತರಿಸಬೇಕಾಗುತ್ತದೆ. ಇದನ್ನು ಮಾಡುವ ವಿಮರ್ಶಕನು ಸಮರ್ಥನಾಗಿರಬೇಕು. ಸಮುದ್ರದ ಜಲವನ್ನು ಮಡಿಗಳಲ್ಲಿ ಸ್ವಲ್ಪ - ಸ್ವಲ್ಪವಾಗಿ ನಿಲ್ಲಿಸಿ, ಸೂರ್ಯನ ಕಿರಣಗಳಿಂದ ಅದನ್ನು ಒಣಗಿಸಿದಾಗ ಲೋಕದ ಅನ್ನಕ್ಕೆ ರುಚಿಯನೀವ ಉಪ್ಪನ್ನು ಪಡೆಯಲಿಕ್ಕೆ ಸಾಧ್ಯವಿದೆ. ನೀರಿನಿಂದ ಲವಣವನ್ನು ಎಂಗಡಿಸುವುದು ಸೂರ್ಯ-ಕಿರಣಗಳ ಸಾಮರ್ಥ್ಯವನ್ನು ಅವಲಂಭಿಸಿರುತ್ತದೆ. ಹಾಗೆಯೇ, ಸಾಹಿತ್ಯ ಸಾಗರದೊಳಗಿನ ಸೌಂದರ್ಯವನ್ನು ಎತ್ತಿ ಇಟ್ಟು ಲೋಕವು ಮೆಚ್ಚುವಂತೆ ಕಲಾಭಿರುಚಿಯನ್ನು ವ್ಯಕ್ತಪಡಿಸಿ ತೋರಿಸುವುದು ಒಳ್ಳೆಯ ಸಂಸ್ಕಾರವುಳ್ಳ, ವ್ಯಕ್ತಿತ್ವವುಳ್ಳ ಸಮರ್ಥನಾದ ವಿಮರ್ಶಕನಿಂದ ಮಾತ್ರ ಸಾಧ್ಯ.

## ವಿಮರ್ಶೆಯ ಮತ್ತು ವಿಮರ್ಶಕನ ಕಾರ್ಯ :

ವಿಮರ್ಶೆಯ ಕಾರ್ಯ ಹೆಚ್ಚು ಜವಾಬ್ದಾರಿಯುತವಾದುದು ಮತ್ತು ಬಹು ಮುಖ್ಯವಾದುದು.

★ ಓದುಗರು ತಾವು ಓದಿದ ಕೃತಿಯ ಬಗ್ಗೆ ಅಸ್ಪಷ್ಟ ಭಾವನೆಗಳನ್ನು ಉಳ್ಳವರಾಗಿರುತ್ತಾರೆ. ಅವುಗಳಿಗೆ ಖಚಿತತೆಯನ್ನು ನೀಡುವ ಕೆಲಸ ವಿಮರ್ಶೆಯದಾಗಿರುತ್ತದೆ. ಕೃತಿಯ ಬಗ್ಗೆ ಹೊಸ ದೃಷ್ಠಿಕೋನವನ್ನುಂಟು ಮಾಡುವ ಕೆಲಸ ಇದರದಾಗಿರುತ್ತದೆ.

★ ವಿಮರ್ಶೆಯ ಕಾರ್ಯ ಸಹೃದಯರಿಗೆ ಓದಿ ಹೇಳುವುದಿಲ್ಲ. ಅವರು ತಾವೇ ಓದಿ ಆಸ್ವಾದಿಸಲು ನೆರವಾಗುವುದು ಮತ್ತು ಓದುಗರ ರಸಜ್ಞತೆಯನ್ನು ಗೌರವಿಸುವುದು.

★ ''ವಿಮರ್ಶೆಯ ಕೆಲಸ ಓದುಗರು ತನ್ನ ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವಂತೆ ಶಾಸನ ಮಾಡುವುದಲ್ಲ. ವಿವರಿಸುವುದು ಮತ್ತು ದೀಪ್ತಗೊಳಿಸುವುದು.''[೪]

★ ವಿಮರ್ಶೆಯು ಕೃತಿಯ ಗುಣ ದೋಷಗಳೆರಡನ್ನೂ ನಿಷ್ಪಕ್ಷಪಾತವಾದ ದೃಷ್ಟಿಯಿಂದ ವಿವೇಚಿಸಿ ಕೃತಿಯ ಉತ್ತಮತೆ ಅದರ ಗುಣಗಳಿಂದ, ಗುಣಗಳ ಮೇಲೆ ನಿಂತಿದೆಯೇ ಹೊರತು ದೋಷಗಳ ಮೇಲೆ ಅಲ್ಲ ಎನ್ನುವುದನ್ನು ಸಹೃದಯರ ಮನಮುಟ್ಟುವಂತೆ ಸಮರ್ಥಿಸಿ ತೋರಬೇಕು.

★ ಕೃತಿ ರಚನೆಯನ್ನು ಕವಿ ಒಂದು ಘಟ್ಟ ಮುಟ್ಟಿದ ನಂತರ ಕೂಡಲೇ ಅಲ್ಲಿ ನಿಲ್ಲದೆ ಮುಂದೆ, ಹೋಗುತ್ತಾರೆ. ಆದರೆ ವಿಮರ್ಶೆಯು ಅಲ್ಲಿ ನಿಂತು, ಅದರಲ್ಲಿರುವ ಸುಪ್ತ ಸೌಂದರ್ಯವನ್ನು,

---

೪. ಜಿ.ಎಸ್. ಶಿವರುದ್ರಪ್ಪ : ವಿಮರ್ಶೆಯ ಪೂರ್ವ ಪಶ್ಚಿಮ, ಸಾಹಿತ್ಯ ಭಂಡಾರ ಪ್ರಕಾಶನ, ೨೦೦೪, ಪುಟ ೧೬.

ಮತ್ತೆ ವಿಲಾಸವನ್ನು ತಾನು ಅವುಗಳನ್ನು ಕಂಡುಂಡ ಪರಿಯನ್ನು ಬಿಚ್ಚಿ ಹೇಳುತ್ತದೆ.

★ ಸಾಹಿತಿಯ ಕಾರ್ಯವು ಸುಂದರವಾದ ಹೂಗಳನ್ನು ಸಿಕ್ಕಲಿಂದ ಆಯ್ದುಕೊಂಡು ರಾಗ-ರಂಗುಗಳನ್ನು ಹೊಂದಿಸಿ, ಚಂದವಾದ ಮಾಲೆಯನ್ನು ಕಟ್ಟುವ ಮಾಲೆಗಾರ. ಈ ಮಾಲೆಗಾರನು ಎಲ್ಲೆಲ್ಲಿಂದ ಯಾವ-ಯಾವ ಹೂಗಳನ್ನು ಆಯ್ದುಕೊಂಡಿದ್ದಾನೆಂಬುದನ್ನು ಸೂಚಿಸುವ ಕಾರ್ಯ ವಿಮರ್ಶೆಯದು. ಅಂದರೆ ಕವಿಯದ ಸಂಘಟಕ ಕಾರ್ಯವಾದರೆ, ವಿಮರ್ಶೆಯದು ವಿಂಗಡಿಸುವ ಕಾರ್ಯ.

★ ಸಾಹಿತ್ಯಕೃತಿಯೊಂದರ ವಿಚಾರಧಾರೆ ಸಮಾಜಕ್ಕೆ ಪ್ರಚೋದಿಸುವಂತಿದ್ದರೆ ವಿಮರ್ಶೆಯು ಅದನ್ನು ಪರಿಶೀಲಿಸಿ ಜನರ ಗಮನವನ್ನು ಸೆಳೆದು ಸಮಾಜ ಆರೋಗ್ಯಪೂರ್ಣವಾಗಿರುವಂತೆ ನೋಡಿಕೊಳ್ಳುವ ಜವಾಬ್ದಾರಿ ವಿಮರ್ಶೆಗೆ ಸೇರಿದೆ.

★ ಓದುಗರೊಡನೆ ಸಂವಾದಿಸುವಾಗ ತಾನೆಲ್ಲವನ್ನೂ ತಿಳಿದವನೆಂಬ ಅಹಂಭಾವವಿರಬಾರದು. ವಿಮರ್ಶಕ ವೈಯುಕ್ತಿಕ ಅಭಿರುಚಿಯ ವರ್ಗದ, ಪಂಥದ, ದೇಶದ, ಮತದ ಪಕ್ಷಪಾತಗಳಿಂದ ಹೊರಬಂದವನಾಗಿರಬೇಕು.

★ ಸಾಮಾನ್ಯ ಓದುಗನೂ ಕೃತಿಯ ಭಾಗಗಳನ್ನು ಓದಿ ಅರ್ಥಮಾಡಿಕೊಂಡಿರುತ್ತಾರೆ. ಆಗ ವಿಮರ್ಶೆ ತಪ್ಪಾಗಿದ್ದರೆ ಅದು ಓದುಗನ ಗಮನಕ್ಕೆ ಬರುತ್ತದೆ. ಆದ್ದರಿಂದ ವಿಮರ್ಶಕನಾದವನು ಸಾಹತ್ಯವನ್ನು ಚೆನ್ನಾಗಿ ಓದಿಕೊಂಡು ವಿಮರ್ಶೆ ಮಾಡುವುದು ಅವನ ಎಚ್ಚರಿಕೆಯ ಕೆಲಸ.

★ ಕೃತಿಯ ಅನುಭವವನ್ನು ಮೊದಲು ತಾನು, ತನಗಾಗಿ ಸವಿದು, ಅನಂತರ ಸಹೃದಯರಿಗಾಗಿ ವ್ಯಾಖ್ಯಾನಿಸುವ ಪವಿತ್ರ ಮಾಧ್ಯಮವಾಗಿ ವಿಮರ್ಶಕ ಕಾರ್ಯನಿರ್ವಹಿಸಬೇಕು.

★ ವಿಮರ್ಶಕ ಕೃತಿಯ ಬಗೆಗೆ ಆಗಲೇ ನಮ್ಮಲ್ಲಿ ರೂಪುಗೊಂಡ ಅಸ್ಪಷ್ಟ ಭಾವನೆಗಳಿಗೆ ಖಚಿತಾಕಾರವನ್ನು ನೀಡುತ್ತಾನೆ. ಕೆಲವು ವೇಳೆ ನಮಗರಿಯದ ಹೊಸ ದೃಷ್ಟಿ ಕೋನಗಳನ್ನು ತೆರೆಯಬೇಕು. ಕೆಲವು ವೇಳೆ ಆತ ಮಾರ್ಗಾನ್ವೇಷಕ ಅಷ್ಟೇ ಅಲ್ಲ ಮಾರ್ಗನಿರ್ಮಾಪಕನೂ ಆಗಿರಬೇಕು. ನಮಗೆ ಅಪರಿಚಿತವಾದುದರ ಬಗ್ಗೆ ದಾರಿ ತೋರುವ, ಪರಿಚಿತವಾಗಿರುವುದರ ಬಗ್ಗೆ ನಾವು ಕಾಣದರುವ ಅಂಶಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುವ ಕಾರ್ಯ ವಿಮರ್ಶಕನದು.

★ ಕವಿ ಇಡಿಯಾಗಿ ಹೇಳಿದುದನ್ನು ವಿಮರ್ಶಕ ಬಿಡಿಬಿಡಿಯಾಗಿ ತೋರಿಸುತ್ತಾನೆ. ಕವಿ ಮುಚ್ಚಿ ಹೇಳಿದುದನ್ನು ವಿಮರ್ಶಕ ಬಿಚ್ಚಿ ಹೇಳುತ್ತಾನೆ.

★ ಕವಿ ವಿಮರ್ಶಕ, ಓದುಗ ಇವರ ಪರಸ್ಪರ, ಸಂಬಂಧವನ್ನು ನೋಡುವಾಗ ಕವಿಗಿಂತಲೂ ಓದುಗನಿಗೆ ವಿಮರ್ಶಕನ ನೆರವು ಬೇಕು. ವಿಮರ್ಶಕನ ನೆರವು, ಪ್ರೋತ್ಸಾಹ, ಹರಕೆ ಇಲ್ಲದಿದ್ದರೆ ಓದುಗ ಬಾಳಲಾರ.

★ ವಿಮರ್ಶಕನಿಗೆ - ಕವಿಗಿರುವ ಸ್ವಾತಂತ್ರ್ಯವಿಲ್ಲದಿದ್ದರೂ ಕವಿಯು ತೋರಿದ ಮಾರ್ಗದಲ್ಲಿ ತಾನು ಸಾಗಿ, ಅವನು ಕಂಡದನ್ನೆಲ್ಲಾ ಕಂಡು,ಅವನು ಅನುಭವಿಸಿದ ರಸಾವೇಶಗಳನ್ನೆಲ್ಲಾ ತೆರೆದಿಡಬೇಕು.

★ ಸಮರ್ಥನಾದ ವಿಮರ್ಶಕನು ಕಲಾವಿದನ ಮನಸ್ಸಿನ ತಳದಲ್ಲಿ ಸೇರಿದ ಕೆಸರನ್ನೂ ಕಲೆಯ ಸೃಷ್ಠಿಯಲ್ಲಿ ಅದರಿಂದ ಉಂಟಾದ ಕೊಂಕು, ಕೋರೆಗಳನ್ನು ಎತ್ತಿ ತೋರಿಸಿ, ಅವನ ಬಗೆಗಣ್ಣನ್ನು ತಿಳಿಸುತ್ತಾನೆ.

★ ವಿಮರ್ಶಕ ಕಲೆಗಾರನಿಗೆ / ಸಾಹಿತಿಗೆ ಮಾರ್ಗದರ್ಶಕ. ಸಾಹಿತಿಯ ಸ್ವಚ್ಛಂದ ವೃತ್ತಿಯನ್ನು ಸಂಯಮದಲ್ಲಿರಿಸಿ ಸ್ವಾತಂತ್ರ್ಯವು ಆತ್ಮಘಾತುಕವಾಗಿ ಪರಿಣಮಿಸದಂತೆ ನೋಡಿಕೊಳ್ಳುವ ಸಮರ್ಥ ವೈದ್ಯನಂತೆ ವಿಮರ್ಶಕನಿರುತ್ತಾನೆ.

★ ★ ★ ★ ★

# ನವೋದಯ ಕಾಲದ ಪ್ರಮುಖ ಕನ್ನಡ ವಿಮರ್ಶಕರು

ಕನ್ನಡ ಸಾಹಿತ್ಯ ಸಂಪ್ರದಾಯಕ್ಕೆ ಸುಮಾರು ಸಾವಿರ ವರ್ಷಗಳ ಇತಿಹಾಸವಿದೆ ಇಂಗ್ಲಿಷ್ ಸಾಹಿತ್ಯದ ಸಂಪರ್ಕ ಉಂಟಾಗುವವರೆಗೆ ನವ್ಮ ಸಾಹಿತ್ಯದಲ್ಲಿ ವಚನ ಚಳುವಳಿಯೊಂದನ್ನು ಬಿಟ್ಟು ಯಾವ ಮೂಲಭೂತವಾದ ಬದಲಾವಣೆಗಳು ಆಗಲಿಲ್ಲ.ಹಾಗೆಂದ ಮಾತ್ರಕ್ಕೆ ನವ್ಮ ಪ್ರಾಚೀನ ಸಾಹಿತ್ಯ ಪರಂಪರೆಯಲ್ಲಿ ಶ್ರೇಷ್ಠವಾದ ಸಾಹಿತ್ಯಕೃತಿಗಳು ಇಲ್ಲವೆಂದು ಹೇಳಲಾಗದು. ಆದರೆ ನಿಂತರವಾಗಿ ಮುಂದುವರಿದುಕೊಂಡು ಬಂದ ಸಾಹಿತ್ಯವನ್ನು ಕುರಿತು ಧೋರಣೆಗಳು ಬದಲಾವಣೆಗೆ ವಿರೋಧವಾಗಿದ್ದವು ಹೀಗಾಗಿ ಸಾಹಿತ್ಯದಲ್ಲಿ ಚರ್ವಿತಚರ್ವಣ ಉಂಟಾಗಿ ಸಾಹಿತ್ಯ ಸತ್ತ್ವಹೀನವಾಯಿತು. ಆಗ ಪಾಶ್ಚಾತ್ಯ ಅದರಲ್ಲೂ ಇಂಗ್ಲಿಷ್ ಸಾಹಿತ್ಯದ ಪರಂಪರೆಯ ಸಂಪರ್ಕ ಉಂಟಾಗಿ ಸಾಹಿತ್ಯಕ್ಕೆ ಸತ್ತ್ವ ತುಂಬುವ ಕೆಲಸ ಪ್ರಾರಂಭವಾಯಿತು.ಅಂದರೆ ಹೊಸದೃಷ್ಟಿ ಧೋರಣೆಗಳು, ಹೊಸ ಅಭಿರುಚಿಗಳು ಈ ಸಾಹಿತ್ಯ ಸಂಪ್ರದಾಯದ ಸಂಪರ್ಕದಿಂದ ಉಂಟಾದವು. ಆಗ ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯ ಪರಂಪರೆಯನ್ನು ಬಲ್ಲವರು ಕನ್ನಡ ಸಾಹಿತ್ಯದ ಇತಿಮಿತಿಗಳನ್ನು ಅರಿತು ಕೊಳ್ಳಲು ಸಾಧ್ಯವಾಗಿ, ಇಂಗ್ಲಿಷ್ ಸಾಹಿತ್ಯದ ದೃಷ್ಟಿಧೋರಣೆಗಳಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಸಾಹಿತ್ಯ ರಚನೆಗೆ ತೊಡಗಿದರು.ಆದರೂ ಹಳೆಯ ಛಂದೋರೂಪಗಳನ್ನು ಬಳಸಿದ್ದರಿಂದ ಕನ್ನಡ ಸಾಹಿತ್ಯದ ದಿಕ್ಕನ್ನು ಬದಲಾಯಿಸಲಾಗಲ್ಲಿಲ್ಲ. ಈ ನಡುವೆ ಕನ್ನಡ ಸಾಹಿತ್ಯಕ್ಕೆ ಹೊಸತನವನ್ನು ತಂದುಕೊಡುವ ಪ್ರಯತ್ನವನ್ನು ಮಾಡುತ್ತಿದ್ದರೂ, ನಿಜವಾಗಿ ಆ ಕೆಲಸ ಸಾಧ್ಯವಾದದ್ದು ಬಿ.ಎಂ.ಶ್ರೀಕಂಠಯ್ಯನವರಿಂದ.

## ಬಿ.ಎಂ.ಶ್ರೀ

ಬಿ.ಎಂ.ಶ್ರೀ ಅವರು ಕನ್ನಡಿಗರು ಎಂದೂ ಮರೆಯದ ಪ್ರೇರಣೆಯನ್ನು ಕನ್ನಡ-ಸಾಹಿತ್ಯಕ್ಕೆ ನೀಡಿದರು. ಕನ್ನಡದಲ್ಲಿ ಭಾವಗೀತಾ ಸಂಪ್ರದಾಯವನ್ನು ಆರಂಭಿಸಬೇಕೆಂಬ ಮಹತ್ತರ ಆಕಾಂಕ್ಷೆಯಿಲ್ಲದೆ ಕನ್ನಡಕ್ಕೆ ಕೆಲವು ಇಂಗ್ಲಿಷ್ ಭಾವಗೀತೆಗಳನ್ನು ಪರಿಚಯಿಸಬೇಕೆಂಬ ಉದ್ದೇಶದಿಂದ ಕನ್ನಡಕ್ಕೆ 'ಇಂಗ್ಲಿಷ್ ಗೀತೆಗಳು' ಕೃತಿಯನ್ನು ಪ್ರಕಟಿಸಿದರು. ಇವರು ಪ್ರಾಚೀನ ಕನ್ನಡ ಕಾವ್ಯ ಪರಂಪರೆಗೆ ತೋರಿದ ಪ್ರತಿಕ್ರಿಯೆ ಇದಾಗಿದ್ದು, ಕನ್ನಡ ಕಾವ್ಯಕ್ಕೆ ಹೊಸದಿಕ್ಕನ್ನು ತೋರಿಸುವ ಕೆಲಸವನ್ನು ಮಾಡಿತು. ಶ್ರೀ ಅವರು ತಮ್ಮ ಬಿಡಿ ಭಾಷಣಗಳಲ್ಲಿ, ಲೇಖನಗಳಲ್ಲಿ ಕನ್ನಡ ಸಾಹಿತ್ಯ ಏನಾಗಬೇಕೆಂದು ಪ್ರತಿಪಾದಿಸುತ್ತಿದ್ದರೋ, ಅದನ್ನು ತಮ್ಮ ಸಂಕಲನದ ಮೂಲಕ ಮಾಡಿತೋರಿಸಲು ಪ್ರಯತ್ನಿಸಿದರು. ಈ ದೃಷ್ಟಿಯಿಂದ ''ಇಂಗ್ಲಿಷ್ ಗೀತೆಗಳು'' ನಮ್ಮ ಪ್ರಾಚೀನ ಕಾವ್ಯ ಪರಂಪರೆಯನ್ನು ಕುರಿತು ಮಾಡಿದ ಪರೋಕ್ಷ ವಿಮರ್ಶೆಯಾಗಿದೆ. ಈ ಮೂಲಕ ಶ್ರೀ ಅವರು ಒಂದು

ಹೊಸ ಕಾವ್ಯ ಸಂಪ್ರದಾಯಕ್ಕೆ ಕಾರಣರಾದರು. ಆದರೆ ‘‘ವಸ್ತು ಮತ್ತು ಛಂದಸ್ಸಿನ ದೃಷ್ಟಿಯಿಂದ ಹೊಸತನ ತಂದುಕೊಟ್ಟರೂ ಇಂಗ್ಲಿಷ್ ಗೀತೆಗಳು ಕೃತಿಯಲ್ಲಿರುವ ಕವನಗಳು ಇಂಗ್ಲಿಷ್ ರ್‍ಯೊಮೊಂಟಿಕ್ ಕಾವ್ಯ ಸಂಪ್ರದಾಯದ ಶ್ರೇಷ್ಠ ಕವನಗಳಾಗಿರದೆ, ಅನುವಾದಿಸಲು ಸುಲಭ ಎನ್ನುವ ಕಾರಣಕ್ಕೆ ಆಯ್ಕೆ ಮಾಡಿಕೊಂಡಂತಿವೆ. ಜೊತೆಗೆ ಇಲ್ಲಿರುವ ಬಹಳಷ್ಟು ಕನಗಳು Sentimental ಎಂದು ಹೇಳಬಹುದು. ಈ ದೃಷ್ಟಿಯಿಂದ ಆ ಕವನಗಳು ಕನ್ನಡಕ್ಕೆ ಹೊಸ ತಿರುವು ಕೊಡುವಲ್ಲಿ ಕಾರಣವಾದರೂ ಅವು ತಂದುಕೊಟ್ಟ ಸತ್ತ್ವ ಪರಿಮಿತಿಯಿಂದ ಕೂಡಿವೆ’’[೧] ಎಂಬ ಆರೋಪವೂ ಅವರ ಮೇಲಿದೆ.

‘ಇಂಗ್ಲಿಷ್ ಗೀತೆಗಳು’ ಸಂಕಲನದಲ್ಲಿ ಪರಿಮಿತಿಗಳಿದ್ದರೂ ಕನ್ನಡದ ಸಂದರ್ಭದಲ್ಲಿ ಅದು ತಂದುಕೊಟ್ಟ ಹೊಸ ಸತ್ವ ಅರ್ಥಪೂರ್ವವಾದದ್ದೆಂದು ಹೇಳಬೇಕು. ಏಕೆಂದರೆ ಈ ಪ್ರಚೋದನೆಯಿಂದ ಕುವೆಂಪು, ಪು.ತಿ.ನ.ಕೆ.ಎಸ್.ಎನ್ ಮುಂತಾದವರು ಮೇಲೆ ಹೇಳಿದ ಪರಿಮಿತಿಗಳನ್ನು ಮೀರಿ ಕಾವ್ಯರಚನೆ ಮಾಡಿದರು. ನಮ್ಮ ಸಾಹಿತ್ಯ ಏನುಗಬೇಕೆಂದು ಕುರಿತು ಹೇಳಿರುವ ಶ್ರೀ ಅವರ ಮಾತುಗಳು ನಮ್ಮ ವಿಮರ್ಶೆ ಏನಾಗಬೇಕೆಂಬುದನ್ನು ಸೂಚಿಸುತ್ತದೆ. ಈ ವಿಚಾರದಲ್ಲಿ ಶ್ರೀ ಅವರು ಕೇವಲ ಹೇಳದೆ, ತಮ್ಮ ಸಾಹಿತ್ಯ ಮತ್ತು ವಿಮರ್ಶೆಯಲ್ಲಿ ಸಾಧಿಸಿ ತೋರಿಸುವ ಪ್ರಯತ್ನ ಮಾಡಿದರು. ಹೊಸ ಮಾರ್ಗವನ್ನು ಆರಂಭ ಮಾಡಿದ ಕೀರ್ತಿ ಅವರದಾದರೂ ಹೊಸದನ್ನು ಆರಂಭಿಸುವ ಮೊದಲಿಗರಿಗೆ ಇರುವ ಅನುಕೂಲ, ಅನಾನುಕೂಲಗಳೆರಡನ್ನೂ ಅವರು ಎದುರಿಸಬೇಕಾಯಿತು. ಆದರೂ ವಿಮರ್ಶೆಯ ಕ್ಷೇತ್ರದಲ್ಲಿ ಅವರು ಮಾಡಿದ ಮಹತ್ವದ ಕಾರ್ಯವೆಂದರೆ ಪ್ರಾಚೀನ ಕಾವ್ಯಗಳ ನೆಲೆ-ಬೆಲೆಗಳನ್ನು ನಿರ್ಣಯಿದ್ದು, ಹಳೆಗನ್ನಡದ ಕಾವ್ಯಗಳನ್ನು ಸಂಗ್ರಹಿಸಿರುವುದು, ಸಂಪಾದಿಸುವುದು ಹಾಗೂ ಪರಿಷ್ಕರಿಸುವುದು ಇವುಗಳ ಜೊತೆಗೆ ಈ ಕಾವ್ಯಗಳ ಮೇಲೆ ಶಾಸ್ತ್ರೀಯವಾದ ರೀತಿಯಲ್ಲಿ ವಿಮರ್ಶೆಯನ್ನು ಬರೆದರು ಹಾಗೆ ನೋಡಿದರೆ ‘‘ಕನ್ನಡ ಕೈಪಿಡಿ’’ಯ ಎರಡನೆಯ ಸಂಪುಟದಲ್ಲಿ ಅವರು ಬರೆದಿರುವ ಕನ್ನಡ ಸಾಹಿತ್ಯ ಚರಿತ್ರೆ ಮೊತ್ತದಲ್ಲಿ ದೊರೆಯುವ ವಿಮರ್ಶೆಯಾಗಿದೆ’’[೨] ಎಂದು ಗುರ್ತಿಸಬಹುದು. ಭಾಷಣಗಳಲ್ಲಿ ಪ್ರಾಚೀನ ಕವಿಗಳ ಬಗ್ಗೆ ಅಭಿವ್ಯಕ್ತಪಡಿಸಿರುವ ಅವರ ಅಭಿಪ್ರಾಯಗಳು ಮತ್ತು ಎಷ್ಟೋ ಹಳೆ ಹೊಸ ಗ್ರಂಥಗಳಿಗೆ ಅವರು ಬರೆದಿರುವ ಮುನ್ನಡೆಗಳು ವಿಮರ್ಶಾತ್ಮಕವಾಗಿದೆ. ಆದರೆ ಆಧುನಿಕ ಗ್ರಂಥಗಳಿಗೆ ಬರೆದಿರುವ ಮುನ್ನಡಿಗಳೆಲ್ಲ ಉತ್ತೇಜಕ ಪರವಾದವು. ಹೊಸ ಕಾವ್ಯದ ಬೆಳವಣಿಗೆಯ ಬಗ್ಗೆ ಅವರು ಯಾವ ಮಾತನ್ನು ಹೇಳಿಲ್ಲ. ಹೊಸ ಸಾಹಿತ್ಯ ಪ್ರಕಾರಗಳ ಲಕ್ಷಣಗಳನ್ನು ವಿವರಿಸುವುದರಲ್ಲಿಯೇ ಅವರ ವಿಮರ್ಶೆ ಮುಗಿದು ಹೋಯಿತು. ಹೊಸ ಮಾರ್ಗವನ್ನು ಸ್ಥಾಪಿಸುವವನಿಗೆ ಬೆನ್ನುತಟ್ಟುವ ಧೋರಣೆ ಶ್ರೀ ಅವರದಾಗಿತ್ತೇ ಹೊರತು, ಹೊಸಮಾರ್ಗ ರೂಪುಗೊಳ್ಳುವ ಸಂದರ್ಭದಲ್ಲಿ ಅದರ ಲೇಖಕರು ಮತ್ತು ವಿಮರ್ಶಕರು ತಾವು ನಡೆಸುತ್ತಿರುವ ಹೊಸ ದಾರಿಯಲ್ಲಿ ಯಾವುದು

---

೧. ಡಾ. ಎನ್.ಕುಮುದ: ಕನ್ನಡ ನವೋದಯ ಕಾವ್ಯ ವಿಮರ್ಶೆಯ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಚೇತನ ಬುಕ್ ಹೌಸ್, ೨೦೦೬, ಪುಟ ೪೬

೨. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೫೭.

ಉಚಿತ, ಯಾವು ಅನುಚಿತ ಎಂಬುದನ್ನು ವಿಮಚಿಸಿಕೊಳ್ಳುತ್ತಾ, ವಿಮರ್ಶಿಸಿಕೊಳ್ಳುತ್ತ ಹೋಗಲು ಹೊಸ ಮಾರ್ಗವನ್ನು ತೋರಿಸುವಲ್ಲಿ ಶ್ರಿ ಅವರು ವಿಫಲರಾದರು ಒಟ್ಟನಲ್ಲಿ ಶ್ರೀ ಅವರು ಆಧುನಿಕ ವಿಮರ್ಶಾ ಸಾಹಿತ್ಯವನ್ನು ಪ್ರೇರೇಪಿಸಿದರೂ ಅದಕ್ಕೆ ಭದ್ರವಾದ ತಳಹದಿಯನ್ನು ಹಾಕಲಿಲ್ಲ ಎಂಬ ಅಭಿಪ್ರಾಯಕ್ಕೆ ಬರಬಹುದು.

## ತಿ.ನಂ. ಶ್ರೀಕಂಠಯ್ಯ

ತಿ.ನಂ. ಶ್ರೀ ಅವರ ಮೂರು ಮುಖ್ಯ ಕೃತಿಗಳೆಂದರೆ 'ಭಾರತೀಯ ಕಾವ್ಯಮೀಮಾಂಸೆ' 'ಕಾವ್ಯಸಮೀಕ್ಷೆ' ಮತ್ತು 'ಸಮಾಲೋಕನ'. ಇವುಗಳಲ್ಲಿ ಮೊದಲನೆಯದು ಭಾರತದ ಪ್ರಾಚೀನ ಲಾಕ್ಷಣಿಕರ ಕಾವ್ಯಮೀಮಾಂಸೆಯನ್ನು ಕುರಿತ ಪರಿಚಯಾತ್ಮಕ ಗ್ರಂಥ. ಉಳಿದೆರಡು ಗ್ರಂಥಗಳು ವಿಮರ್ಶಾ ಕೃತಿಗಳಾಗಿದೆ. ಇವುಗಳಲ್ಲಿ ಅವರ ವೈಯುಕ್ತಿಕ ಪ್ರತಿಭೆಯನ್ನು ಕಾಣಬಹುದಾಗಿದೆ. 'ಕಾವ್ಯಸಮೀಕ್ಷೆ' ಯಲ್ಲಿ ಸುಕುಮಾರವಾದ ವಿಮರ್ಶೆಯ ಪದ್ಧತಿ ಬೆಳೆದು ಬಂದಿರುವುದನ್ನು ಕಾಣಬಹುದು. 'ಸಮಾಲೋಕ'ನದಲ್ಲಿ ಬಹಳಷ್ಟು ಲೇಖನಗಳು ಸಂಶೋಧನೆಗೆ ಮೀಸಲಾಗಿದೆ. ಇದಕ್ಕಿಂತ ಹೆಚ್ಚಿನದನ್ನು ನಾವು ತಿ.ನಂ.ಶ್ರೀ ಅವರಿಂದ ಅಪೇಕ್ಷಿಸಬಹುದು. ಉಚ್ಚ ಮಟ್ಟದ ಅಭಿರುಚಿಯೊಂದನ್ನೇ, ಆಧಾರವಾಗಿಟ್ಟುಕೊಂಡಿರುವ ವಿಮರ್ಶೆ ಅವರದು. ಅಲ್ಲದೆ ಅನೇಕ ಕಾವ್ಯಗಳ ಸತ್‌ಪರಂಪರೆಯಿಂದ ಸಂಸ್ಕಾರಗೊಂಡ ಅವರ ವಿಮರ್ಶಕ ಪ್ರತಿಭೆ ಆಧುನಿಕ ಯುಗದ ಅನೇಕ ವಿಕೃತಿಗಳಿಂದ ದೂರವಾಗಿದೆ. ಹೊಸಗನ್ನಡ ಕಾವ್ಯಪರಂಪರೆ ಇಂಥವರಿಂದ ವಿಮರ್ಶೆಯನ್ನು ಅಪೇಕ್ಷಿಸಿದರೆ ಅದರಲ್ಲಿ ತಪ್ಪಿಲ್ಲ.

## ಮಾಸ್ತಿ ವೆಂಕಟೇಶ ಅಯ್ಯಂಗಾರ್

ಮಾಸ್ತಿ ಅವರು ಕನ್ನಡದ ಕಥನ ಸಾಹಿತ್ಯವನ್ನು ಆರಂಭಿಸಿ ಅದಕ್ಕೆ ಪ್ರೌಢತೆಯನ್ನು ತಂದುಕೊಟ್ಟರು. ಕಥೆಗಾರರಾಗಿ ಅವರ ಸ್ಥಾನ ಕನ್ನಡದಲ್ಲಿ ಅದ್ವಿತೀಯವಾದುದ್ದು, ಅವರು ಕವಿ, ನಾಟಕಕಾರರೂ ಹೌದು. ವಿಮರ್ಶೆಯನ್ನು ಕನ್ನಡದಲ್ಲಿ ಆರಂಭಿಸಿದವರೂ ಮಾಸ್ತಿಯವರೇ ಆಗಿದ್ದಾರೆ. 'ಸತಿ ಹಿತೈಹಿಣೀ' ಗ್ರಂಥಮಾಲೆಯ ಮೂಲಕ ಪ್ರಕಟಿಸಿದ ತಿರುಮಲಾಂಬ ಅವರ ಏಳು ಕಾದಂಬರಿಗಳನ್ನು ಕುರಿತು ಮಾಸ್ತಿಯವರ ವಿಮರ್ಶೆ ಆಗ ಮಂಗಳೂರಿನಿಂದ ಪ್ರಕಟವಾಗುತ್ತಿದ್ದ 'ಕೃಷ್ಣಸೂಕ್ತಿ' ಎಂಬ ಪತ್ರಿಕೆಯಲ್ಲಿ ಸುಮಾರು 1915ರಲ್ಲಿ ಪ್ರಕಟವಾಯಿತು. ಈ ಲೇಖನದ ಮೂಲಕ ಕನ್ನಡ ವಿಮರ್ಶೆಯ ಉಗಮವಾಯಿತೆಂದು ಹೇಳಬಹುದು. ಏಕೆಂದರೆ ಸಾಹಿತ್ಯ ವಿಮರ್ಶೆ ಎಂದು ಕರೆಯುವ ರೀತಿಯ ಬರಹ ಅದಾಗಿತ್ತು. ಕನ್ನಡದಲ್ಲಿ ಇನ್ನೂ ಹೊಸ ಸಾಹಿತ್ಯದ ಸೃಷ್ಠಿ ಶೈಶವಾಸ್ಥೆಯಲ್ಲಿದ್ದಾಗ ಮಾಸ್ತಿಯವರು ಇದನ್ನು ಬರೆದರು. ಯಾವುದೇ ಒಂದು ಹೊಸ ಪರಂಪರೆ ಆರಂಭವಾದಾಗ ಮೊದಲು ಸೃಷ್ಟಿಯಾಗಿದ್ದ ಸಾಹಿತ್ಯವನ್ನು ವಿಮರ್ಶೆ ಮಾಡಬೇಕೆಂಬ ನಿಲುವಿನಿಂದ

ಮಾಸ್ತಿಯವರು ವಿಮರ್ಶೆಗೆ ತೊಡಗಿದರು.

ಮಾಸ್ತಿಯವರು ಕನ್ನಡದ ಸಾಹಿತ್ಯದ ಒಂದು ವಿಶಿಷ್ಟ ಸನ್ನಿವೇಶದಲ್ಲಿ ವಿಮರ್ಶೆ ಬರೆಯಲು ಪ್ರಾರಂಭಿಸಿದರು. ಅಂದರೆ ಕನ್ನಡ ಸಾಹಿತ್ಯದ ಅರುಣೋದಯ ಸಂದರ್ಭದಲ್ಲಿ ಇರುವ ಸಾಹಿತ್ಯವನ್ನು ವಿಮರ್ಶಿಸಿ ಬೆಲೆ ಕಟ್ಟಿದರು. ಮುಖ್ಯವಾಗಿ ಹೊಸ ಸಾಹಿತ್ಯ ನಿರ್ಮಾಣಕ್ಕೆ ಸನ್ನಿವೇಶವನ್ನು ಸೃಷ್ಟಿ ಮಾಡುವ ಜವಾಬ್ದಾರಿಯನ್ನು ವಿಮರ್ಶೆ ಹೊರಬೇಕೆಂದು ಮನಗಂಡಿದ್ದು ಮಾಸ್ತಿಯವರು ಆ ನಿಟ್ಟಿನಲ್ಲಿ ಮುನ್ನಡೆದರು. 1924 ರಲ್ಲಿ 'ಸಾಹಿತ್ಯ' ಎಂಬ ಉಪನ್ಯಾಸ ಗ್ರಂಥವನ್ನು ಬರೆದ ಮಾಸ್ತಿಯವರು ಆ ಗ್ರಂಥದಲ್ಲಿ ಸಾಹಿತ್ಯವನ್ನು ಕುರಿತು ಸಮಗ್ರವಾಗಿ ವಿವೇಚನೆಯನ್ನು ಮಾಡುವ ಕೆಲಸವನ್ನು ಮಾಡಿದ್ದಾರೆ. ಪಾಶ್ಚಾತ್ಯರಲ್ಲಿ ಪ್ರಚಲಿತವಿದ್ದ ಸಾಹಿತ್ಯವನ್ನು ಕುರಿತ ಪರಿಕಲ್ಪನೆಗಳನ್ನು ಆಧರಿಸಿ ಮಾಸ್ತಿಯವರು ಇಲ್ಲಿ ವಿವೇಚನೆ ಮಾಡಿದ್ದಾರೆ ಇದರಲ್ಲಿ ಅನೇಕ ಪರಿಮಿತಿಗಳಿದ್ದರೂ, ಇದು ಆ ವಿಷಯವನ್ನು ಕುರಿತು ಕನ್ನಡದಲ್ಲಿ ಬಂದ ಮೊದಲ ಗ್ರಂಥವಾಗಿದೆ. ಈ ಗ್ರಂಥ ಸಾಹಿತ್ಯಾಭ್ಯಾಸಕ್ಕೆ ಒಂದು ಉತ್ತಮ ಪ್ರವೇಶಿಕೆಯಂತಿದೆ. ಮಾಸ್ತಿಯವರು ತಮ್ಮ 'ಸಾಹಿತ್ಯ' ಗ್ರಂಥದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಹಲವಾರು ಪಾಶ್ಚಾತ್ಯ ಪರಿಕಲ್ಪನೆಗಳನ್ನು ಕನ್ನಡಕ್ಕೆ ತಂದುಕೊಂಡುವುದರ ಮೂಲಕ ಕನ್ನಡ ಸಾಹಿತ್ಯ ಮತ್ತು ವಿಮರ್ಶೆಗೆ ಭದ್ರ ಬುನಾದಿಯನ್ನು ಹಾಕಿದ್ದಾರೆ.

ಪು.ತಿ.ನರಸಿಂಹಾಚಾರ್ ಅವರ 'ಹಣತೆ'ಯನ್ನು ಕುರಿತ ಮುನ್ನಡಿಯಲ್ಲಿ ಪು.ತಿ.ನ ಅವರ ಕಾವ್ಯವನ್ನು ತಾವು ಮೆಚ್ಚಿಕೊಳ್ಳುವುದಕ್ಕೆ ಕಾರಣಗಳನ್ನು ಮಾಸ್ತಿಯವರು ಕೊಡುತ್ತಾರೆ. ಬೇಂದ್ರೆಯವರ 'ನಾದಲೀಲೆ'ಗೆ ಬರೆದ ಮುನ್ನಡಿಯು ಅವರ ಉತ್ತಮ ವಿಮರ್ಶಕ ಬರಹಗಳಲ್ಲಿ ಒಂದಾಗಿದೆ. ಹೀಗೆ ಅನೇಕ ಕವಿಗಳ ಕವನ ಸಂಕಲನಗಳಿಗೆ ಮುನ್ನಡಿಯ ರೂಪದಲ್ಲಿ ಬರೆಯದಿರುವ ಮಾಸ್ತಿಯವರು ವಿಮರ್ಶೆಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಾರೆ. ಮಾಸ್ತಿಯವರು ಪ್ರಾಯೋಗಿಕ ವಿಮರ್ಶೆಯನ್ನೂ ಬರೆದ್ದಿದ್ದಾರೆ, ಹಳೆಗನ್ನಡ ಕವಿಗಳಲ್ಲದೆ ಜಗತ್ತಿನ ಬೇರೆ-ಬೇರೆ ಕವಿಗಳ ಸಂತರ ಪರಿಯಾತ್ಮಕ ಹಾಗೂ ವಿಮರ್ಶಕ ಲೇಖನಗಳನ್ನೂ ಬರೆದಿದ್ದಾರೆ. ಹೀಗೆ ಮಾಸ್ತಿಯವರಲ್ಲಿ ವಿಮರ್ಶಕ ಗುಣಗಳಿಗೇನೂ ಕೊರತೆಯಿಲ್ಲ ಆದರೆ ಮಾಸ್ತಿಯವರು ನಿರ್ಮಿಸುವ ಸಾಹಿತ್ಯ ಹಾಗೂ ಅವರ ವಿಮರ್ಶೆಗಳು ಪರಸ್ಪರ ಪೂರಕವಾಗಿಲ್ಲ. ಅವರು ಈ ತಲೆಮಾರಿನ ಮಾರ್ಗ ಸಂಪ್ರದಾಯದ ಲೇಖಕರೆಂದು ನಿರ್ವಿವಾದವಾಗಿ ಕರೆಯಬಹುದಾಗಿದೆ. ಆದರೆ ಅವರ ವಿಮರ್ಶೆ ಮಾತ್ರ ಇದಕ್ಕೆಲ್ಲ ವಿರುದ್ಧವಾಗಿದೆ. ರೊಮ್ಯಾಂಟಿಕ್ ಸಂಪ್ರದಾಯದ ತತ್ವಗಳನ್ನೆಲ್ಲ ಅವರ ವಿಮರ್ಶೆಯಲ್ಲಿ ಕಾಣಬಹುದು. ''ಸಾಹಿತ್ಯ ನಿರ್ಮಿತಿ ಹಾಗೂ ವಿಮರ್ಶೆ ಇವೆರಡೂ ತಮ್ಮ ಕಾರ್ಯಗಳಲ್ಲಿ ಭಿನ್ನವೆಂದು ತೋರಿದರೂ ಅವುಗಳ ಮೂಲ ಪ್ರತಿಭೆ ಒಂದೇ ಇರುವುದು''[೩] ಎಂದು ಮಾಸ್ತಿಯವರು ಒಂದು ಕಡೆ ಹೇಳಿರುವುದನ್ನು ಕೀರ್ತಿನಾಥ ಕುರ್ತುಕೋಟಿ ಅವರು ಉಲ್ಲೇಖಿಸುತ್ತಾರೆ. ಅಂತೂ ಮೇಲಿನ

೩. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೬೮.

ಹೇಳಿಕೆಯನ್ನು ನಂಬಿಕೊಂಡು ಹೊರಟ ಸಾಹಿತ್ಯಾಭಿಸಿಗಳಿಗೆ ಮಾಸ್ತಿಯವರ ಭಿನ್ನತೆ ಅರಿವಾಗಿ ದಿಗ್ಭ್ರಮೆಗೊಳ್ಳುತ್ತಾರೆ.

## ಡಿ.ವಿ.ಗುಂಡಪ್ಪ

ಡಿ.ವಿ.ಜಿ. ಅವರು ಕನ್ನಡ ನವೋದಯದ ಆಚಾರ್ಯ ಪುರುಷರಲ್ಲಿ ಒಬ್ಬರು ಬಿ.ಎಂ.ಶ್ರೀ, ಮಾಸ್ತಿ,ದ.ರಾ.ಬೇಂದ್ರೆ ಮುಂತಾದವರಂತೆಯೇ ಕನ್ನಡದ ಆಧುನಿಕ ಸಾಹಿತ್ಯ ಪ್ರಕಾರಗಳು ರೂಪುಗೊಳ್ಳುತ್ತಿದ್ದ ಕಾಲದಲ್ಲಿಯೇ ಸಾಹಿತ್ಯ ವಿವೇಚನೆಯನ್ನು ಮಾಡಿದವರು ಡಿ.ವಿ.ಜಿ. ಅಂದರೆ ಹೊಸಗನ್ನಡ ಸಾಹಿತ್ಯ ಪ್ರಕಾರಗಳು ಇನ್ನೂ ನೆಲೆಯೂರದ ಕಾಲ ಆದಾಗಿತ್ತು. 80 ದಶಕದಲ್ಲಿ ಒಂದು ಸಮೃದ್ಧವಾದ ಆಧುನಿಕ ಕನ್ನಡ ಕಾವ್ಯಪರಂಪರೆ ರೂಪುಗೊಂಡಿರುವುದು ಕಂಡುಬರುತ್ತದೆ. ಇದಕ್ಕೆ ಬುನಾದಿಯನ್ನು ಹಾಕಿದ ಮುಖ್ಯರಲ್ಲಿ ಡಿ.ವಿ.ಜಿ. ಅವರೂ ಒಬ್ಬರು ಆದುದ್ದರಿಂದ ಇವರನ್ನು ''ಕನ್ನಡದ ಪುನರುತ್ಥಾನದ ಮಾನವ''[೪] ಎಂದು ವಿದ್ವಾಂಸರೊಬ್ಬರು ಕರೆದಿದ್ದಾರೆ. ಏಕೆಂದರೆ ಕನ್ನಡದ ಕೆಲಮೆ ಮೇಧಾವಿಗಳಲ್ಲಿ ಒಬ್ಬರಾದ ಡಿ.ವಿ.ಜಿ.ಅವರು ವಿಜ್ಞಾನ, ತತ್ವಜ್ಞಾನ, ರಾಜಕೀಯ,ಸಂಸ್ಕೃತಿ, ಸಮಾಜಶಾಸ್ತ್ರ ಮುಂತಾದ ಕ್ಷೇತ್ರಗಳಲ್ಲಿ ಆಸಕ್ತಿ ಹೊಂದಿದ್ದು, ಆಯಾ ಕ್ಷೇತ್ರಗಳಲ್ಲಿಯ ತಿಳುವಳಿಯನ್ನು ಸಾಹಿತ್ಯ ವಿಮರ್ಶೆಯಲ್ಲಿಯೂ ತಂದರು. ಡಿ.ವಿ.ಜಿ ಅವರ ವಿಮರ್ಶೆಯ ಮೇಲೆ ಜಗತ್ತಿನ ವಿಮರ್ಶಾ ಸಾಹಿತ್ಯ ಸಾರಸಂಗ್ರಹಮ ಪ್ರಭಾವ ಬೀರಿತು. ಪಾಶ್ಚಾತ್ಯ ಪರಿಕಲ್ಪನೆಗಳನ್ನು ಡಿ.ವಿ.ಜಿ.ಯವರು ಬಳಸಿಕೊಳ್ಳವಾಗ ಅವುಗಳನ್ನು ಒಪ್ಪಿ ಬರೆದು ಅವುಗಳ ಅರ್ಥ ವಿಮೋಚನೆ ಮಾಡಿದರು. ಈ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಭಾರತೀಯ ಪರಿಕಲ್ಪನೆಗಳ ಸಂದರ್ಭದಲ್ಲಿ ವಿಮೋಚಿಸಿ, ವಿಮರ್ಶಿಸಿ ತಮ್ಮದೇ ಆದ ನಿಲುವುಗಳನ್ನು ತೆಗೆದು ಪ್ರತಿಪಾದಿಸುವ ರೀತಿ ಡಿ.ವಿ.ಜಿಯವರದ್ದಲ್ಲ ಅವರ ಸಾಹಿತ್ಯ ಅಥವಾ ಕಾವ್ಯವನ್ನು ಕುರಿತು ವಿವೇಚನೆಯನ್ನೊಳಗೊಂಡ ಬರಹಗಳು ಮುಖ್ಯವಾಗಿ ಅವರು ಮೂರು ಮುಖ್ಯ ಕೃತಿಗಳಾದ 'ಜೀವನ ಸೌಂದರ್ಯ ಮತ್ತು ಸಾಹಿತ್ಯ', 'ಸಾಹಿತ್ಯ ಶಕ್ತಿ' ಮತ್ತು 'ಕಾವ್ಯಸ್ವಾರಸ್ಯ' ಕೃತಿಗಳಲ್ಲಿ ದೊರೆಯುತ್ತದೆ.

ಡಿ.ವಿ.ಜಿ.ಯವರ ವಿಮರ್ಶೆಯ ಸ್ವರೂಪ ತಾತ್ವಿಕವಾದದ್ದು, ಉತ್ತಮ ಕಾವ್ಯ ಮನುಷ್ಯನ ಮೇಲೆ ಉಂಟುಮಾಡುವ ಪ್ರಭಾವವನ್ನು ವಿವೇಚಕ ಶಕ್ತಿಯುಳ್ಳವನು ಹೇಗೆ ಲಾಭಕ್ಕಾಗಿ ಮಾರ್ಪಡಿಸಿ ಕೊಳ್ಳಬಹುದೆಂಬುದರ ಬಗ್ಗೆ ಡಿ.ವಿ.ಜಿ.ಯವರ ಆಲೋಚನೆಗಳು ಗಂಭೀರವಾಗಿದೆ. ಆಗ ಸಾಹಿತ್ಯದ ಭಾವಾತಿರೇಕ, ಉತ್ಸಾಹಾತಿರೇಕಗಳನ್ನು ಇಂಥ ವಿಮರ್ಶೆಯಿಂದ ಸರಿಪಡಿಸಬಹುದಾಗಿದೆ.''[೫] ಒಟ್ಟಿನಲ್ಲಿ ಸ್ಪಷ್ಟವಾದ, ತಿಳಿಯಾದ ವಿಚಾರಸರಣಿ, ಖಚಿತವಾದ ಭಾಷೆ ಸುಂದರ ದೃಷ್ಟಾಂತಗಳು ಡಿ.ವಿ.ಜಿ.

---

೪. ಡಾ. ಎನ್.ಕುಮುದ: ಕನ್ನಡ ನವೋದಯ ಕಾವ್ಯ ವಿಮರ್ಶೆಯ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಚೇತನ ಬುಕ್ ಹೌಸ್, ೨೦೦೬, ಪುಟ ೭೩
೫. ಕೀರ್ತಿನಾಥ ಕುರ್ತುಕೋಟಿ: ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೬೨

ಲೇಖನಗಳನ್ನು ಸತ್ವಯುತವಾಗಿ ಮಾಡಿದೆ. ಮಿತ ಭಾಷೆ ಅವರ ಶೈಲಿಯ ಲಕ್ಷಣವಾಗಿದ್ದು, ವಿಮರ್ಶೆಯ ಸಾಮಿತಿಗಳು ವಿಪುಲವಾಗಿ ದೊರೆಯುವುದು ಅವರೊಬ್ಬರಲ್ಲಿಯೇ ಎಂದರೆ ತಪ್ಪಾಗಲಾರದು.

## ದ.ರಾ.ಬೇಂದ್ರೆ

ದ.ರಾ.ಬೇಂದ್ರೆಯವರು ಕನ್ನಡ ಸಾಹಿತ್ಯ ಇತಿಹಾಸದ 20ನೇಯ ಶತಮಾನದ ಸಂದರ್ಭದಲ್ಲಿ ದೊಡ್ಡ ಕವಿ ಕನ್ನಡ ಭಾಷೆಯ ಸಾಧ್ಯತೆಗಳನ್ನೆಲ್ಲಾ ಅತ್ಯಂತ ಸಮರ್ಥವಾಗಿ ಪ್ರತಿಭಾಪೂರ್ಣವಾಗಿ ತಮ್ಮ ಕಾವ್ಯದಲ್ಲಿ ಲೀಲಾಜಾಲವಾಗಿ ಕೊಳ್ಳೆಹೊಡೆದರು.ಅವರ ಕಾವ್ಯದಲ್ಲಿ ಭಾಷೆ-ಭಾವಾರ್ಥಗಳ ಸಂಬಂಧ ಅನನ್ಯವಾದದ್ದು, ಬೇಂದ್ರೆಯವರನ್ನು ಸಾಹಿತ್ಯ ವಿಮರ್ಶಕರಾಗಿ ಪರಿಗಣಿಸಿ ನೋಡಹೊರಟರೆ ಕೆಲವು ಸಮಸ್ಯೆಗಳು ಉದ್ಭವವಾಗುತ್ತದೆ. ಬೇಂದ್ರೆಯವರ ವಿಮರ್ಶೆಯಲ್ಲಿ ಸ್ವೋಪಜ್ಞತೆಯಿಂದ ಕೂಡಿದ ಹೊಳಹುಗಳಿವೆ. ಕವಿ,ಕಾವ್ಯ, ಸಹೃದಯ ಈ ಪ್ರಸಿದ್ದವಾದ ಮುಕ್ಕೂಟವನ್ನು ಕುರಿತು ಅವರದೇ ಆದ ಹೇಳಿಕೆಗಳಿವೆ. ಸಾಹಿತ್ಯ ಮತ್ತು ಸಮಾಜದ ಸಂಬಂಧವನ್ನು ಕುರಿತೂ ಕೆಲವು ಮಾತುಗಳನ್ನಾಡಿದ್ದಾರೆ. ಆಧುನಿಕ ಸಮಾಜದ ಸಂದರ್ಭವನ್ನು ಕುರಿತು ಕೆಲವು ಮಾತುಗಳನ್ನು ಅವರು ಆಡಿದ್ದಾರೆ. ಆಧುನಿಕ ಸಮಾಜದ ಸಂದರ್ಭದಲ್ಲಿ ಕಾವ್ಯದ ಮಹತ್ವವೇನು ? ಸ್ವರೂಪವೇನು ? ಎಂಬುದನ್ನು ಕುರಿತು ಅವರು ಹೇಳಿದ್ದಾರೆ. ಸಾಹಿತ್ಯ ವಿಮರ್ಶೆಯನ್ನು ನಮ್ಮಲ್ಲಿ ಆರಂಭ ಮಾಡಿದ ಬಿ.ಎಂ.ಶ್ರೀ, ಮಾಸ್ತಿ ಮತ್ತಿತರ ನವೋದಯ ವಿಮರ್ಶಕರಂತೆ ಬೇಂದ್ರೆಯವರೂ ಕೂಡ ಕನ್ನಡ ಕಾವ್ಯ ಇನ್ನೂ ರೂಪುಗೊಳ್ಳುತ್ತಲಿದ್ದ ಸಂದರ್ಭದಲ್ಲಿ ವಿಮರ್ಶೆ ಬರೆದವರಾದ್ದರಿಂದ ಮುಂಬಲಿರುವ ಕಾವ್ಯ ಸ್ವರೂಪ ಎಂತಹದಾಗಿರಬೇಕೆಂಬ ದೃಷ್ಟಿಯಿಂದಲೇ ಬರೆಯುತ್ತಾರೆ. ಆದರೆ ಇತರೆ ವಿಮರ್ಶಕರ ರೀತಿಯಲ್ಲಿ ಇವರು ಕಾವ್ಯ ಪರಿಕಲ್ಪನೆಗಳನ್ನಿಟ್ಟುಕೊಂಡು ತರ್ಕಬದ್ದವಾಗಿ, ಸಮಗ್ರವಾಗಿ ವಿವೇಚಿಸಲು ಹೋಗುವುದಿಲ್ಲ. ಹೀಗಾಗಿ ಕಾವ್ಯವನ್ನು ಕುರಿತ ಅವರ ಮಾತುಗಳೆಲ್ಲವೂ ಬಿಡಿ ಹೇಳಿಕೆಗಳಂತೆ ಉಳಿದುಬಿಡುತ್ತವೆ. ಅಲ್ಲಿ ಭಾರತೀಯ ಕಾವ್ಯಮೀಮಾಂಸೆಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆಯ ಹೊಳಹುಗಳು ಕಾಣಿಸಿಗುತ್ತವೆಯಾದರೂ ಅವುಗಳ ಶಾಸ್ತ್ರಿಯ ವಿವೇಚನೆ ದೊರೆಯುವುದಿಲ್ಲ. ಕುವೆಂಪು, ಪುತಿನ, ಮಾಸ್ತಿ ಮುಂತಾದ ಕವಿ ವಿಮರ್ಶಕರಂತೆ, ಪಾಶ್ಚಾತ್ಯ ಪರಿಕಲ್ಪನೆಗಳ ವಿವೇಚನೆಯಾಗಲಿ, ಭಾರತೀಯ ಮತ್ತು ಪಾಶ್ಚಾತ್ಯ ದೃಷ್ಟಿಕೋನಗಳ ಕ್ರಮಬದ್ದವಾದ, ತರ್ಕಬದ್ದವಾದ ತೌಲನಿಕ ವಿಮರ್ಶೆಯಾಗಲಿ ಬೇಂದ್ರೆಯವರಲ್ಲಿ ಹೆಚ್ಚಾಗಿ ಸಿಕ್ಕುವುದಿಲ್ಲ. ಆದರೆ ಅವರು ಆಡುವ ಮಾತುಗಳಲ್ಲಿ ಅನ್ಯ ಪ್ರಭಾವಗಳನ್ನು ಅವರು ಸ್ವೀಕರಿಸಿರುವ ಬಗ್ಗೆ ತಿಳಿಯುತ್ತದೆ.

ಮೇಲೆ ಹೇಳಿದ ಅಭಿಪ್ರಾಯಗಳಿಗೆ ಹೊರತಾಗಿಯೂ ಬೇಂದ್ರೆಯವರ ಕೃತಿಗಳ ಮುನ್ನಡಿಯಲ್ಲಿ ಎಷ್ಟೋ ಕಡೆಗೆ ನೈಜ ವಿಮರ್ಶೆಯನ್ನು ನೋಡಬಹುದು. ಅಲ್ಲದೆ ಸಾಹಿತ್ಯದ ನಿರ್ಮಾಣ ಪ್ರತಿಭೆಯ ಸ್ವರೂಪ, ಕಲ್ಪನಾವಿಲಾಸ ಮೊದಲಾದ ವಿಷಯಗಳ ಬಗ್ಗೆ ಕವಿತೆಗಳನ್ನು ಬರೆದಿದ್ದಾರೆ. ಈ ಕವಿತೆಗಳನ್ನು ಸದ್ಯಕ್ಕೆ

ಬಿಟ್ಟುಕೊಟ್ಟರೂ ಉಳಿದ ಅವರ ಸಾಹಿತ್ಯ ವಿಮರ್ಶೆ ಮಹತ್ವ ಪೂರ್ಣವಾಗಿದೆ. ಬೇಂದ್ರೆಯವರು ವಿಮರ್ಶೆಯನ್ನು ಕೇವಲ ಶಾಸ್ತ್ರ ಪರಿಚಯಕ್ಕಾಗಿ ತೆಗೆದುಕೊಳ್ಳಲಿಲ್ಲ. ಅದನ್ನು ಗಂಭೀರ ವಿಷಯವನ್ನಾಗಿ ಮಾಡಿಕೊಂಡರು ಹೇಗೆ ಸಾಹಿತ್ಯ ವಿಮರ್ಶೆಗೆ ಶ್ರೇಷ್ಠ ಸ್ಥಾನವನ್ನು ಕಲ್ಪಿಸಿಕೊಡಲು ಬೇಂದ್ರೆಯವರು ಪ್ರಯತ್ನಿಸಿದರು. ವಿಮರ್ಶೆ ಕೇವಲ ಕೃತಿಯ ನೆರಳಾಗದೆ, ಈ ಕೃತಿಯ ಅರ್ಥಪೂರ್ಣತೆಯನ್ನು ಮಹತ್ವವನ್ನು ಸಾರುವ ಸಾಧನವಾಗಿದೆ ಎಂಬುದನ್ನು ಬೇಂದ್ರೆಯವರು ಅರಿತಿದ್ದರು.

## ಕುವೆಂಪು

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರಿಗೆ ವಿಶಿಷ್ಟವಾದ ಸ್ಥಾನವಿದೆ.ಆಧುನಿಕ ಕನ್ನಡ ಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣರಾದ ಮಹತ್ವದ ಲೇಖಕರಲ್ಲಿ ಕುವೆಂಪು ಒಬ್ಬರು. ಬಿ.ಎಂ.ಶ್ರೀ ಕನ್ನಡ ಆಧುನಿಕ ಸಾಹಿತ್ಯದ ಆಚಾರ್ಯ ಪುರುಷ. ಅವರ ನೇತೃತ್ವದಲ್ಲಿ ಆಧುನಿಕ ಕನ್ನಡ ಸಾಹಿತ್ಯ ಹೊಸ ಸತ್ವವನ್ನು ಪಡೆದುಕೊಂಡು ಬೆಳೆಯಲು ಕಾರಣರಾದ ಕೆಲವೇ ಕೆಲವು ಪ್ರಮುಖ ಲೇಖಕರಲ್ಲಿ ಕುವೆಂಪು ಒಬ್ಬರು.ಕವಿಯಾಗಿ , ಕಾದಂಬರಿಕಾರರಾಗಿ, ವಿಮರ್ಶಕರಾಗಿ ಒಬ್ಬ ಧೀಮಂತ ವಿಚಾರವಾದಿಯಾದಿ ಕನ್ನಡದ ಸಾಂಸ್ಕೃತಿಕ ಪ್ರಪಂಚಕ್ಕೆ ಅವರು ಕೊಟ್ಟ ಕೊಡುಗೆ ಅಪೂರ್ವವಾದದ್ದು. ಕುವೆಂಪು ಮುಖ್ಯವಾಗಿ ಸೃಜನಶೀಲ ಲೇಖಕರು ಸಾಹಿತ್ಯ ವಿಮರ್ಶೆ ಏನಿದ್ದರೂ ಅದು ಅವರ ಸೃಜನ ಪ್ರಕ್ರಿಯೆಗೆ ಪೂರಕವಾಗುವಂತೆ ಸೃಷ್ಟಿಕೊಂಡದ್ದು. ವಿಮರ್ಶಕರಾಗಿ ಅವರನ್ನು ಬಿಲೆಕಟ್ಟುವಾಗ ಈ ಅಂಶವನ್ನು ಮರೆಯಲು ಸಾಧ್ಯವಿಲ್ಲ. ಏಕೆಂದರೆ ಒಬ್ಬ ಸೃಜನಶೀಲ ಲೇಖಕ ವಿಮರ್ಶೆಯನ್ನು ಬರೆಯುವುದಕ್ಕೂ ವಿಮರ್ಶೆಯೇ ಕಸುಬಾಗಿವುಳ್ಳ ವಿಮರ್ಶಕ ವಿಮರ್ಶೆಯನ್ನು ಬರೆಯುವುದಕ್ಕೂ ಮೂಲಭೂತವಾದ ವ್ಯತ್ಯಾಸವಿರುತ್ತದೆ.

ವಿಮರ್ಶೆಗೆ ಕುವೆಂಪು ಅವರ ಮಹತ್ವಪೂರ್ಣ ಕಾಣಿಕೆಗಳಿಂದ 'ಸರೋವರದ ಸಿರಿಗನ್ನಡಿಯಲ್ಲಿ' 'ಪಂಪನಲ್ಲಿ ಭವ್ಯತೆ', 'ದ್ರೌಪದಿಯ ಶ್ರೀಮುಡಿ' ಮುಂತಾದ ಲೇಖನಗಳು ಉತ್ತಮ ಪ್ರಾಯೋಗಿಕ ವಿಮರ್ಶೆಗೆ ದೃಷ್ಟಾಂತಗಳಾಗಿವೆ. ಇವುಗಳಲ್ಲಿ 'ತಪೋನಂದನ'ದಲ್ಲಿನ 'ಪಂಪನಲ್ಲಿ ಭವ್ಯತೆ' ಎಂಬ ಲೇಖನದಲ್ಲಿ ಭವ್ಯತೆಯ ಪರಿಕಲ್ಪನೆಯನ್ನು ಸಂಗ್ರಹವಾಗಿ ತಿಳಿಸಿ ಅದನ್ನು ಪಂಪನ ಕೃತಿಗಳಲ್ಲಿ ಅದರಲ್ಲೂ ಮುಖ್ಯವಾಗಿ 'ಆದಿಪುರಾಣ'ದಲ್ಲಿ ಬರುವ ಸಂದರ್ಭಗಳಿಗೆ ಅನ್ವಯಿಸಿ ವಿವೇಚಿಸಿದ್ದಾರೆ. ಭವ್ಯತೆ ಎಂಬ ಪದವನ್ನು Sub-line ಎಂಬುದಕ್ಕೆ ಸಂವಾದಿಯಾಗಿ ಮೊಟ್ಟಮೊದಲಿಗೆ ಬಳಸಿ ಪಂಪನಲ್ಲಿ ಭವ್ಯತೆ ಎಂಬ ಲೇಖನದಲ್ಲಿ ನಿದರ್ಶನ ಸಹಿತವಾಗಿ ವ್ಯಾಖ್ಯಾನಿಸಿದವರು ಕುವೆಂಪು ಈ ಲೇಖನದಲ್ಲಿ ಭವ್ಯತೆಯ ಗುಣಲಕ್ಷಣಗಳನ್ನು ಕುರಿತು ''ಎಲ್ಲಿ ಸೌಂದರ್ಯ ಪರಿಮಿತದಲ್ಲಿ ವಿಹರಿಸುವುದೋ ಅಲ್ಲ ಮೈದೋರುವುದು ಲಾಲಿತ್ಯ. ಎಲ್ಲಿ ಅದು ಅಪರಿಮಿತದಲ್ಲಿ ವಿಜೃಂಭಿಸಿ ವಿರಾಟ್ ಸ್ಪರ್ಶಿಯಾಗುತ್ತದೆಯೋ ಅಲ್ಲಿ ಹೊರ ಹೊಮುವುದು ಭವ್ಯತೆ, ಅಲ್ಪ ಶಬ್ದಕ್ಕೆ ಯಾವ ಹೀನಾರ್ಥವನ್ನೂ ಆರೋಪಿಸದೆ ಹೇಳುವುದಾದರೆ ಅಲ್ಪತೆ ಲಾಲಿತ್ಯದ ಒಂದು ಲಕ್ಷಣ

ಭೂಮತೆ ಭವ್ಯತೆಯ ಲಕ್ಷಣ''[೬] ಎಂದು ಹೇಳುತ್ತಾರೆ. ಅದೇ ರೀತಿ ದ್ರೌಪದಿಯ ಶ್ರೀಮುಡಿ ಕೃತಿಯಲ್ಲಿ ಭಾಷೆ ಲೋಕೋಪಯೋಗಿ ಮತ್ತು ಭಾವೋಪಯೋಗಿ ಎಂಬ ಲೇಖನದಲ್ಲಿ

''ಅರ್ಥ ಸಹೃದಯ ಶ್ಲಾಘ್ಯ: ಕಾವ್ಯಾತ್ಮ ಯೋ ವ್ಯವಸ್ಥಿತ:

ವಾಚ್ಯ ಪ್ರತೀಯ ಮಾನಾಖ್ಯೆ ತಸ್ಯ ಭೇದಾವು ಭೌಸ್ಮೃತ

ಧನ್ಯಾಲೋಕ

A Statement May be used for the sake of the reference, trae or false which it causes this is the scientific use of Language, But it may also be used for the sake of the effects in emotion and attitude produced by the reference it occasions, this ic the emotive use of Language"[7] ಎಂಬ ಐ.ಎ.ರಿಚರ್ಡ್ಸ್‌ನ ಉದ್ಧರಣೆಯೊಂದನ್ನು ಕೊಡುತ್ತ ಭಾವೋಪಯೋಗಿ ಮತ್ತು ಲೋಕೋಪಯೋಗಿ ಭಾಷೆಗಳ ಬಗ್ಗೆ ವಿವರಣೆ ನೀಡುತ್ತಾರೆ.

ಕುವೆಂಪು ಅವರು ತಮ್ಮ ಕಾವ್ಯಸೃಷ್ಟಿಯ ಸಂದರ್ಭದಲ್ಲಿ ಎದುರಾಗುವ ಸಮಸ್ಯೆಗಳನ್ನೇ ತಮ್ಮ ಸಾಹಿತ್ಯ ವಿಮರ್ಶೆಯ, ವಿವೇಚನೆಯ ವಸ್ತುಗಳಾಗಿ ಮಾಡಿಕೊಳ್ಳುತ್ತಾರೆ. ಇವರ ವಿವೇಚನೆ ಕನ್ನಡ ಸಾಹಿತ್ಯ ವಿಮರ್ಶೆಗೆ ಕೊಡುಗೆಯಾಗಿರುವಂತೆ , ವೈಯುಕ್ತಿಕವಾಗಿ ಕವಿಯಾದ ಅವರ ಅವಶ್ಯಕತೆಗಳನ್ನು ಪೂರೈಸುವಂತದಾಗಿದೆ. ಹೀಗೆ ಅವರ ಸೃಜನ ಸಾಹಿತ್ಯಕ್ಕೂ, ವಿಮರ್ಶೆಗೂ ಒಂದು ಪೂರಕ ಸಂಬಂಧವಿದೆ. ಕುವೆಂಪು ಅವರು ತಮ್ಮ ಕಾವ್ಯಸೃಷ್ಟಿಯ ಸಂದರ್ಭದಲ್ಲಿ , ಅದಕ್ಕೆ ಪೂರಕವಾಗುವ ಕಾವ್ಯ ವಿಮರ್ಶೆಯನ್ನು ಬರೆದವರು. ಆದರೆ ಇತರೆ ಕವಿ-ವಿಮರ್ಶಕರ ವಿಮರ್ಶೆಯಲ್ಲಿ ಕಾಣದಿರುವ ಒಂದು ವ್ಯವಸ್ಥೆಯನ್ನು ಇವರ ವಿಮರ್ಶೆಯಲ್ಲಿ ಕಾಣುತ್ತೇವೆ. ಒಟ್ಟಿನಲ್ಲಿ ನವೋದಯ ಕಾಲಕ್ಕೆ ಬಂದಂತಹ ಕುವೆಂಪು ಕನ್ನಡದ ಸಂದರ್ಭದಲ್ಲಿ ಸಾಹಿತ್ಯ ವಿಮರ್ಶೆಯನ್ನು ಒಂದು ಗಂಭೀರ ಶಿಸ್ತಾಗಿ ರೂಪಿಸುವ ಕೆಲಸವನ್ನು ಮಾಡಿದವರಲ್ಲಿ ಮುಖ್ಯರಾಗಿ ಕಂಡು ಬರುತ್ತಾರೆ.

## ಪು.ತಿ.ನರಸಿಂಹಾಚಾರ್

ಕನ್ನಡದ ನವೋದಯದ ಮೂವರು ಮಹತ್ವಪೂರ್ಣ ಕವಿಗಳೆಂದು ಪರಿಗಣಿತರಾಗಿರುವವರಲ್ಲಿ ಪು.ತಿ.ನ ಒಬ್ಬರು. ಮತ್ತಿಬ್ಬರು ಬೇಂದ್ರೆ ಮತ್ತು ಕುವೆಂಪು. ಪು.ತಿ.ನ.ಅವರನ್ನು ಮುಖ್ಯವಾಗಿ ಜಿಜ್ಞಾಸು ಕವಿ ಎಂದು ವಿಮರ್ಶಕರು ಗುರ್ತಿಸುತ್ತಾರೆ. 'ಭವನಿಮಜ್ಜನ ಚಾತುರ್ಯ' ಮತ್ತು 'ಲಘಿಮಾಕೌಶಲ' ಇವು ಪು.ತಿ.ನ

---

೬. ಕುವೆಂಪು : ತಪೋನಂದನ, ಉದಯರವಿ ಪ್ರಕಾಶನ, ೨೦೦೫, ಪುಟ ೩೦
೭. ಕುವೆಂಪು : ದ್ರೌಪದಿಯ ಶ್ರೀ ಮುಡಿ, ಉದಯರವಿ ಪ್ರಕಾಶನ, ೨೦೦೫, ಪುಟ ೬೧

ಅವರು ವಿಮರ್ಶೆಯ ಪರಿಭಾಷೆಗಿತ್ತ ಸ್ತುತ್ಯವಾದ ಕೊಡುಗೆಯಾಗಿವೆ. ಆದರೆ ''ಅವರ ಕಾವ್ಯಸಿದ್ಧಾಂತ ಮತ್ತು ವಿಮರ್ಶೆಯ ಮೇಲೆ ಪಾಶ್ಚಾತ್ಯ ಪ್ರಭಾವ ಇದೆ. ಮೇಲುನೋಟಕ್ಕೆ ಈ ಪ್ರಭಾವ ಇಲ್ಲ ಎನಿಸಿದರೂ ಸೂಕ್ಷ್ಮವಾಗಿ ಗಮನಿಸಿದರೆ ಅವರ ಆಲೋಚನೆಗಳು ಪಾಶ್ಚಾತ್ಯ ಸೌಂದರ್ಯ ಶಾಸ್ತ್ರಜ್ಞರ ಚಿಂತನೆಗಳಿಂದ ಪ್ರಚೋದಿತವಾಗಿರುವುದು ಕಂಡು ಬರುತ್ತದೆ''[೮]. ಭಾರತೀಯ ಪರಂಪರೆಯ ರಸಸಿದ್ಧಾಂತದ ಪ್ರತಿಪಾದಕರಾಗಿರುವ ಪು.ತಿ.ನ.ತಮ್ಮ ನಿಲುವುಗಳನ್ನು ಪ್ರತಿಪಾದಿಸುವಾಗ ಅವುಗಳಿಗೆ ಪೂರಕವಾಗಿರುವ ಪಾಶ್ಚಾತ್ಯ ಪರಿಕಲ್ಪನೆಗಳನ್ನು ಭಾರತೀಯ ಪರಿಕಲ್ಪನೆಗಳನ್ನು ಸಂಪೂರ್ಣವಾಗಿ ತಮ್ಮವು ಎನ್ನುವಂತೆ ಉಪಯೋಗಿಸಿಕೊಳ್ಳುತ್ತಾರೆ. ಹೀಗಾಗಿ ಅವರ ಬರಹಗಳಲ್ಲಿ ಆಗಲೇ ಪ್ರಚಲಿತವಿರುವ ಸಿದ್ಧಾಂತಗಳ ವಿವೇಚನೆಗಳ ಫಲವಾಗಿ ಅವರ ನಿಲುವುಗಳು ರೂಪುಗೊಳ್ಳುತ್ತವೆ ಎನಿಸುವುದಕ್ಕಿಂತ ತಮ್ಮ ನಿಲುವುಗಳಿಗೆ ಅವುಗಳನ್ನು ಪೂರಕವಾಗಿ ಬೆಳೆಸಿಕೊಳ್ಳುತ್ತಾರೆ.

## ವಿ. ಸೀತಾರಾಮಯ್ಯ

ನವೋದಯದ ಮುಖ್ಯ ಕವಿ ವಿಮರ್ಶಕರಲ್ಲಿ ವಿ.ಸೀ. ಕೂಡ ಒಬ್ಬರು. ಇತರ ಹಿರಿಯ ನವೋದಯ ಲೇಖಕರಂತೆಯೇ ಪಾಶ್ಚಾತ್ಯ ರೋಮ್ಯಾಂಟಿಕ್ ಕಾವ್ಯ ಮತ್ತು ವಿಮರ್ಶೆಯ ಪರಂಪರೆಯಿಂದ ಪ್ರೇರಿತವಾಗಿದ್ದಾರೆ. ಆದರೆ ರೋಮ್ಯಾಂಟಿಕ್ ಪರಂಪರೆಯವರಲ್ಲದ ಆಧುನಿಕ ವಿಮರ್ಶಕರ ಪರಿಕಲ್ಪನೆಗಳನ್ನು ವಿ.ಸೀ. ಅವರ ವಿಮರ್ಶೆ ಒಳಗೊಳ್ಳುವುದು ಒಂದು ವಿಶೇಷವಾಗಿದೆ. ನಿರಪೇಕ್ಷವಾದುದು ಯಾವುದೂ ಇಲ್ಲವೆಂಬುದನ್ನು ನಂಬುವ ವಿ.ಸೀ. ಅವರು ಸಾಹಿತ್ಯ ಮತ್ತು ವಿಮರ್ಶೆಯನ್ನು ಅದೇ ದೃಷ್ಠಿಯಿಂದ ಕಾಣುತ್ತಾರೆ. ವಿಮರ್ಶೆಯ ಮಾನದಂಡಗಳು ಎಂಥವೇ ಆಗಿದ್ದರೂ ಅವು ಸಾಂಧರ್ಭಿಕವಾದವು ಎಂಬುದು ಅವರ ನಿಲುವಾಗಿದೆ. ನಮ್ಮಲ್ಲಿಲ್ಲದ ಅನೇಕ ವಿಷಯಗಳು, ಸಾಹಿತ್ಯ ಪ್ರಕಾರಗಳು, ಆಲೋಚನೆಗಳು, ಪಾಶ್ಚಾತ್ಯರಿಂದ ಬಂದಿದೆ ಎನ್ನುವುದನ್ನು ಗುರುತಿಸುವ ವಿ.ಸೀ. ಅವರು ನವೋದಯದ ಇತರ ಹಿರಿಯ ಸಾಹಿತಿಗಳಂತೆಯೇ, ತಾವೂ ಕೂಡ ಕನ್ನಡದ ಮೇಲೆ ಆರಂಭದಲ್ಲಿ ಆಗುತ್ತಿದ್ದ ಪಾಶ್ಚಾತ್ಯ ಪ್ರಭಾವವನ್ನು ಸ್ವಾಗತಿಸಿದರು. ಅಷ್ಟೇ ಅಲ್ಲ ಆ ಪ್ರಭಾವಗಳಿಗೆ ತಾವೂ ಒಳಗಾಗಿ ಸಾಹಿತ್ಯ ರಚನೆಯ ಜೊತೆ ವಿಮರ್ಶೆಯ ಬಗ್ಗೆಯೂ ಬರೆದರು. ಅವರ ಪ್ರಕಾರ ಹೊಸ ಪ್ರಭಾವವನ್ನು ಹಿಂದಿನ ಸಂಪ್ರದಾಯ ಸ್ವೀಕರಿಸಬೇಕು. ಏಕೆಂದರೆ ಎರಡು ಬೇರೆ - ಬೇರೆ ಸಂಪ್ರದಾಯಗಳ ಸಾಹಿತ್ಯದಲ್ಲಿ ಒಂದಿಲ್ಲೊಂದು ಗುಣ ಇರುತ್ತದೆ. ಅದನ್ನು ಇನ್ನೊಂದು ಸಾಹಿತ್ಯ ಸ್ವೀಕರಿಸಿ ಸಾರವಾಗಿ ಬೆಳೆಯಲು ಅನುಕೂಲವಾಗುತ್ತದೆ ಎಂಬುದು ಅವರ ನಿಲುವು.

ಮೊದಲೇ ಹೇಳಿದಂತೆ ವಿ.ಸೀ. ನಮ್ಮ ನಾಡಿನ ಧೀಮಂತರಲ್ಲೊಬ್ಬರಾಗಿದ್ದಾರೆ. ವರ್ತಮಾನದ

---

೮. ಡಾ. ಎನ್.ಕುಮುದ: ಕನ್ನಡ ನವೋದಯ ಕಾವ್ಯ ವಿಮರ್ಶೆಯ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಚೇತನ ಬುಕ್ ಹೌಸ್, ೨೦೦೬, ಪುಟ೧೩೨

ದೃಷ್ಠಿಯಿಂದ ನೋಡಿದಾಗ ಅವರು ಹಳೆಯ ತಲೆಮಾರಿನವರಾದರೂ, ಮನೋವೃತ್ತಿ ಆಗಿನ ವಾತಾವರಣವನ್ನು ಲಕ್ಷಿಸಿದರೆ ತೀರ ಹೊಸಬಗೆಯದಾಗಿದೆ. ವರ್ತಮಾನದ ಪರಿಸ್ಥಿತಿಯಲ್ಲಿ ಯಾರೂ ಕಾಣದಿದ್ದ ಒಂದು ಅರ್ಥಹೀನತೆಯನ್ನು ಕಂಡು ಅಸ್ವಸ್ಥರಾದರು. ಅವರ ಸಾಹಿತ್ಯ ಕೃತಿಗಳಂತೆ ಅವರ ವಿಮರ್ಶೆಯಲ್ಲಿಯೂ ಈ ಅಸ್ವಸ್ಥತೆ ಕಂಡುಬರುತ್ತದೆ. ಮಾಡುವ ಎಲ್ಲಾ ಕೆಲಸವೂ ಪರಿಪೂರ್ಣವಾಗಿ, ನಿರ್ಮಲವಾಗಿ, ಚೆಲುವಾಗಿರಬೇಕೆಂಬ ಪ್ರಾಮಾಣಿಕವಾದ ಅವರಲ್ಲಿದುದರಿಂದ ಅವರು ಯಾವ ಮಾತನ್ನೂ ಬಹು ಬೇಗ ಒಪ್ಪುವುದಿಲ್ಲ . ಇವರ ''ಇಂಥ ಮನೋವೃತ್ತಿಗೆ ತಕ್ಕ ಅವಕಾಶ ಹಾಗೂ ಸಾಮಾಗ್ರಿಗಳಿಲ್ಲದಿರುವದೇ ಅವರ ಅಸ್ವಸ್ಥತೆಯ ಕಾರಣವಾಗಿರಬಹುದು''[೯] ಎಂದು ಕುರ್ತುಕೋಟಿಯವರು ಸಂಶಯಿಸುತ್ತಾರೆ. ವಿ.ಸೀ. 'ಕವಿ-ಕಾವ್ಯ-ದೃಷ್ಠಿ'ಯಲ್ಲಿ ಸಾಹಿತ್ಯ, ಸ್ವರೂಪ, ಕಲೆಯ ಪ್ರಪಂಚ, ಕಲೆಯ ಕ್ಷೇತ್ರದಲ್ಲಿ ಎದ್ದಿರುವ ವಾದಗಳು, ಸ್ಫೂರ್ತಿ ಹಾಗೂ ಕಲೆಗಾರಿಕೆ, ಕಲಾಕೃತಿಯ ಅರ್ಥ ಮೊದಲಾದ ಸಮಸ್ಯೆಗಳನ್ನು ಚರ್ಚಿಸಿದ್ದಾರೆ. ಹಳೆಯದರ ಬಗ್ಗೆ ಗೌರವ ಹಾಗೂ ಹೊಸಕಾಲದ ಪ್ರಜ್ಞೆ ಇವುಗಳ ನಡುವೆ ವಿ.ಸೀ. ಅವರಲ್ಲೇ ಒಳತೋಟಿಯನ್ನು ಕಾಣಬಹುದು. ಸಾಹಿತ್ಯದ ಉತ್ಪತ್ತಿ ಹಾಗೂ ಸ್ವರೂಪಗಳ ಬಗ್ಗೆ ವಿ.ಸೀ. ಅವರ ಅಭಿಪ್ರಾಯಗಳು ಪಾಶ್ಚಾತ್ಯ ವಿಮರ್ಶಕರ ವಿಚಾರಗಳನ್ನು ಹೋಲುತ್ತವೆ. ಪಾಶ್ಚಾತ್ಯರಲ್ಲಿ ಮುಖ್ಯವಾಗಿ ಐ.ಎ.ರಿಚರ್ಡ್ಸ್, ಎ.ಸಿ. ಬ್ರಾಡ್ಲೆ, ಟಿ. ಎಸ್. ಎಲಿಯಟನ ವಿಚಾರಧಾರೆಗಳು ವಿ.ಸೀ.ಯವರ ಮೇಲೆ ಪ್ರಭಾವಬೀರಿವೆ.

## ಎಸ್. ವಿ. ರಂಗಣ್ಣ

ಕನ್ನಡದ ವಿಮರ್ಶೆಯ ಪರಂಪರೆಯನ್ನು ರೂಪಿಸಿದ ಆದ್ಯರಲ್ಲಿ ರಂಗಣ್ಣನವರು ಒಬ್ಬರು ನವೋದಯ ವಿಮರ್ಶೆಯನ್ನು ಬರೆದವರಾಗಿದ್ದು, ಸಾಮಾನ್ಯವಾಗಿ ಸ್ವತಃ ಸೃಜನಶೀಲ ಕೃತಿಗಳನ್ನು ರಚಿಸಿದ ಕವಿಗಳು. ಆದರೆ ರಂಗಣ್ಣನವರು ಸಾಹಿತ್ಯ ವಿಮರ್ಶೆಯನ್ನೇ ಪ್ರಧಾನವಾಗಿ ಸ್ವೀಕರಿಸಿದರು. ಪಾಶ್ಚಾತ್ಯ ಅದರಲ್ಲೂ ಪ್ರಾಚೀನ ಕಾವ್ಯಮೀಮಾಂಸೆ ಮತ್ತು ನಾಟಕ ಸಿದ್ಧಾಂತಗಳಲ್ಲಿ ಪರಿಣಿತರಷ್ಟೇ ಅಲ್ಲದೇ ಬಿ.ಎಂ.ಶ್ರೀ ಅವರಂತೆ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ಈ ಹಿನ್ನಲೆಯಲ್ಲಿ ಕನ್ನಡ ಸಾಹಿತ್ಯವನ್ನು, ಅದರಲ್ಲೂ ಪ್ರಾಚೀನ ಕನ್ನಡ ಕವಿಗಳನ್ನು ಕುರಿತು ಅವರು ವಿಮರ್ಶೆ ಮಾಡಿದರು. ಆದುದರಿಂದ ಅನಿವಾರ್ಯವಾಗಿ ಪ್ರಾಶ್ಚಾತ್ಯ ಪರಿಕಲ್ಪನೆಗಳ ಬೆಳಕಿನಲ್ಲಿ ನಮ್ಮ ಸಾಹಿತ್ಯವನ್ನು ಪರೀಕ್ಷಿಸುವ ಕೆಲಸವನ್ನು ಅವರು ಮಾಡಿದರು.

ಪ್ರತಿಯೊಬ್ಬ ಕವಿಯ ಶೈಲಿಯ ವೈಶಿಷ್ಟ್ಯವನ್ನೂ ಪ್ರಧಾನ ಮಾನದಂಡವಾಗಿಟ್ಟುಕೊಂಡು ಕವಿಗಳನ್ನು ವಿಮರ್ಶಿಸಿದರು. ಇವರ ಶೈಲಿ ಭಾಗ-1-2-3 ಇವುಗಳಲ್ಲಿರುವ ಲೇಖನಗಳಲ್ಲಿ ಇದನ್ನು ಕಾಣಬಹುದು. ''ಸಾಹಿತ್ಯ ವಿಮರ್ಶಕನಿಗೆ ಸಹೃದಯ ಒಂದು ಕಣ್ಣಾದರೆ, ನಿರ್ದಾಕ್ಷಿಣ್ಯ ಇನ್ನೊಂದು ಕಣ್ಣು, ಮನುಷ್ಯರನ್ನು

---

೯. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೮೮

ಬೆಳೆಸುವ ಶಕ್ತಿ ವಿಮರ್ಶೆಗೆ ಬರಬೇಕಾದರೆ, ಅದರಿಂದ ಜನ ಅಪೇಕ್ಷಿಸಬೇಕು ಉತ್ತಮ, ಮಧ್ಯಮ, ಸಾಧಾರಣವೆಂಬ ಪರಿಜ್ಞಾನ ಬೋಧನೆಯನ್ನು ಸಾಹಿತ್ಯದೊಡನೆ ವಿಚಕ್ಷಣತೆಯಿಂದ ಎಸಗುವ ಹೃದಯೈಕ್ಯವೇ ವಿಮರ್ಶೆ''[೧೦] ಎನ್ನುವ ಮಾತುಗಳಿಂದ ರಂಗಣ್ಣನವರ ವಿಮರ್ಶೆಯ ಧೋರಣೆಯೇನೆಂದು ತಿಳಿದುಬರುತ್ತದೆ.

ರಂಗಣ್ಣನವರಿಗೆ ವಿಮರ್ಶೆಯ ನಿಷ್ಠೂರ ಮಾನದಂಡಗಳೆಂದರೆ ಅಪಾರ ಒಲವು. ಆದರೆ ಪರಸ್ಪರ ಪ್ರೋತ್ಸಾಹ, ಸಹೃದಯ ರೀತಿಯ ವಿಮರ್ಶೆಯೇ ಹೆಚ್ಚಾಗಿದ್ದ ನವೋದಯದ ಸನ್ನಿವೇಶದಲ್ಲಿ ನಿಷ್ಠೂರತೆಯನ್ನು ರೂಪಿಸುವುದು ಬಹಳ ಕಷ್ಟದ ಸಂಗತಿಯಾಗಿತ್ತು. ಇದು ರಂಗಣ್ಣನವರಿಗೂ ತಿಳಿದ ವಿಷಯವಾಗಿತ್ತು. ಭಾರತೀಯ ಕಾವ್ಯಮೀಮಾಂಸೆ ಮೂಲಭೂತವಾಗಿ ಸಹೃದಯ ಸೃಷ್ಠಿಯ ಕಡೆಗೆ ಒಲವು ತೋರಿದರೆ ಆಧುನಿಕ ಪಾಶ್ಚಾತ್ಯ ವಿಮರ್ಶೆ ತರ-ತಮ ಪ್ರಜ್ಞೆಯ ನಿರ್ಮಾಣದತ್ತ ಮುಖ್ಯಗಮನ ಹರಿಸಿತ್ತು. ರಂಗಣ್ಣನವರು ಸಾಹಿತ್ಯದ ಸಾಮಾನ್ಯ ಸ್ವರೂಪದ ಬಗೆಗೆ ಮಾತನಾಡುವ ಪಶ್ಚಿಮದ ಪರಿಭಾಷೆಗೆ ಹತ್ತಿರವಿರುವ ಹಾಗೆ ಕನ್ನಡ ವಿಮರ್ಶೆಯ ನುಡಿಗಟ್ಟನ್ನು ರೂಪಿಸಿದರು.

ವಿಮರ್ಶಕರಾಗಿ ರಂಗಣ್ಣನವರ ಮಹತ್ವವಿರುವುದು ಅವರು ತಾಳುವ ನಿರ್ದಾಕ್ಷಿಣ್ಯ ಪ್ರವೃತ್ತಿ ಮತ್ತು ಕೃತಿಯ ಗುಣದೋಷಗಳನ್ನು ವಸ್ತುನಿಷ್ಠವಾಗಿ ಹೇಳುವುದರಲ್ಲಿ, ಸಾಮಾನ್ಯವಾಗಿ ಆ ಕಾಲದ ವಿಮರ್ಶೆಯಲ್ಲಿ ವಿಮರ್ಶೆಗಿಂತ ಪ್ರೋತ್ಸಾಹಿಸುವ, ಬೆನ್ನುತಟ್ಟುವ ಪ್ರವೃತ್ತಿಯೇ ಪ್ರಧಾನವಾಗಿತ್ತು (ಬಿ.ಎಂ.ಶ್ರೀಯವರೇ ಇದಕ್ಕೆ ನಿದರ್ಶನ ಎಂಬುದನ್ನು ನೆನೆಯಬೇಕು)ವಿಮರ್ಶೆಯಲ್ಲಿ ಅಂಥ ಪ್ರಶಂಸೆ ಸಲ್ಲದು ಮತ್ತು ಉತ್ಪ್ರೇಕ್ಷೆಗೆ ಅವಕಾಶವಿಲ್ಲ ಎಂಬುದು ಅವರ ಧೋರಣೆಯಾಗಿದೆ. ಸಾಹಿತ್ಯವನ್ನು ಶುದ್ಧ ಸಾಹಿತ್ಯ ದೃಷ್ಠಿಕೋನದಿಂದ ನೋಡಬೇಕಲ್ಲದೆ ಮತ, ಧರ್ಮಗಳೆಂಬ ಸಾಂಸ್ಕೃತಿಕ ಅಂಶಗಳನ್ನು ಅದರ ಮೇಲೆ ಹೇರಬಾರದು ಎನ್ನುತ್ತಾರೆ. ಅಲ್ಲದೆ ನಮ್ಮದು ಎನ್ನುವ ಕಾರಣಕ್ಕಾಗಿ ಯಾವುದನ್ನೂ ಅತಿಪ್ರಶಂಸೆ ಮಾಡುವುದನ್ನು ರಂಗಣ್ಣನವರು ತಿರಸ್ಕರಿಸುತ್ತಾರೆ.

ರಂಗಣ್ಣನವರು ವಿಮರ್ಶೆಯ ಬಗೆಗೆ ದೃಢವಾದ ಅಭಿಪ್ರಾಯಗಳನ್ನು ಹೊಂದಿದ್ದರೂ ಅವರ ವಿಮರ್ಶೆ ವಿಕ್ಷಿಪ್ತತೆಯಿಂದ ತುಂಬಿಕೊಂಡಿದೆ. ಅದಕ್ಕೆ ಕಾರಣವೆಂದರೆ ಅದರ ತಳಹದಿಗೆ ಒಂದು ಸುಸಂಬದ್ಧವಾದ ಸಾಹಿತ್ಯ ಮೀಮಾಂಸೆಯಿಲ್ಲ. ವಿಮರ್ಶೆ ಇವರಿಗೆ ತೀರ ವೈಯುಕ್ತಿಕವಾದ ವ್ಯಾಪಾರವೆಂಬಂತೆ ತೋರಿದೆ. ''ಪ್ರಶಂಸೆ ಸಾಕೋ, ಪರೀಕ್ಷೆ ಬೇಕೋ ಲೇಖನದಲ್ಲಿ ವಿಮರ್ಶೆ ಕೇವಲ ಗುಣ-ದೋಷಗಳ ಎಣಿಕೆಯಲ್ಲ ಎಂಬ ತತ್ತ್ವವನ್ನೊಟ್ಟಿಕೊಂಡರೂ ಅದರಂತೆ ತಾವೇ ನಡೆದಿಲ್ಲವೆಂಬುದು ವಿಷಾದಕರವಾಗಿದೆ ''[೧೧] ಎಂದು ಕುರ್ತುಕೋಟಿಯವರ ಅಭಿಪ್ರಾಯ ಪಡುತ್ತಾರೆ.

---

೧೦. ಡಾ. ಎನ್.ಕುಮುದ: ಕನ್ನಡ ನವೋದಯ ಕಾವ್ಯ ವಿಮರ್ಶೆಯ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಚೇತನ ಬುಕ್ ಹೌಸ್, ೨೦೦೬, ಪುಟ ೧೫೪
೧೧. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೭೩

# ನವೋದಯ ಕಾಲದ ಪ್ರಾತಿನಿಧಿಕ ವಿಮರ್ಶಾ ಕೃತಿಗಳು -ವಿಶ್ಲೇಷಣೆ

## ನವೋದಯ ಕಾಲದ ಕನ್ನಡ ವಿಮರ್ಶೆ

ಯಾವುದನ್ನು ನಾವು ನವೋದಯ ಕಾವ್ಯ ಎಂದು ಕರೆಯಲಾಗುತ್ತದೆಯೋ ಅದರ ಉಗಮವೇ ಕನ್ನಡದ ಆಧುನಿಕ ಕಾವ್ಯಪರಂಪರೆಯ ಉಗಮ ಆಗಿದೆ. ಈ ಕಾವ್ಯಪರಂಪರೆಗೆ ಮುಖ್ಯವಾಗಿ ಪ್ರೇರಣೆ ನೀಡಿದ್ದು ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ. ಇಂಗ್ಲಿಷ್‌ನಂತೆ ರೊಮ್ಯಾಂಟಿಕ್ ಕಾವ್ಯಪರಂಪರೆಗಳಾದ ಜರ್ಮನ್, ಫ್ರೆಂಚ್ ಇತ್ಯಾದಿ ಭಾಷೆಗಳು ಕನ್ನಡ ಕಾವ್ಯದ ಮೇಲೆ ಯಾವ ಪರಿಣಾಮ ಪ್ರಭಾವಗಳನ್ನು ಬೀರಲಿಲ್ಲ. ನಮ್ಮ ಕವಿ - ವಿಮರ್ಶಕರಿಗೆ ಆ ಭಾಷಾ ಸಾಹಿತ್ಯಗಳ ಪರಿಚಯವಿಲ್ಲದಿದ್ದು ಕಾರಣವಾಗಿರಬಹುದು. ಈ ಭಾಷೆಗಳ ಸಾಹಿತ್ಯ ಮತ್ತು ವಿಮರ್ಶೆ ಇಂಗ್ಲಿಷ್ ಭಾಷೆಯಲ್ಲಿ ಅನುವಾದದ ಮೂಲಕ ದೊರೆಯುತ್ತಿದ್ದರೂ ನಮ್ಮ ಕವಿವಿಮರ್ಶಕರ ಗಮನ ಈ ಕಡೆ ಹೋಗಲಿಲ್ಲ. ಕಾರಣ ನಮ್ಮ ರೊಮ್ಯಾಂಟಿಕ್ ಕಾವ್ಯ ಮತ್ತು ವಿಮರ್ಶೆ ಕೇವಲ ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ ಮತ್ತು ವಿಮರ್ಶೆಕರಿಂದ ಗಾಢವಾಗಿ ಪ್ರಭಾವಗೊಂಡಿತ್ತು.

ನವೋದಯ ವಿಮರ್ಶಕರ ನೆಲೆಗಳನ್ನು ಅವರ ವೃತ್ತಿ ಮತ್ತು ಪ್ರವೃತ್ತಿಯ ಹಿನ್ನಲೆಯಿಂದ ನೋಡುವ ಅಗತ್ಯವಿದೆ. ವಿಮರ್ಶೆಯನ್ನು ನಾವು ಸೃಜನ ಬರವಣಿಗೆಯಿಂದ ಹೊರತಾಗಿಯೇ ನೋಡುತ್ತೇವೆ ಮತ್ತು ವಿಮರ್ಶೆಯನ್ನು ಸೃಜನಸಾಹಿತ್ಯದ ಉಪ ಉತ್ಪನ್ನವೆಂದು ಹೇಳಿದರೂ ವಿಮರ್ಶೆ ಸೃಜನಾತ್ಮಕ ಸಾಮರ್ಥ್ಯವನ್ನು ಹೊಂದಿದೆಯೆಂದು ಒಪ್ಪಿಕೊಂಡಿದ್ದೇವೆ. '' ನವೋದಯ ಸಾಹಿತ್ಯ ಹಾಗೂ ಅಂದಿನ ಸಾಹಿತ್ಯ ವಿಮರ್ಶೆ ಮತ್ತು ವಿಮರ್ಶಕರನ್ನು ನಾವು ಒಟ್ಟಾಗಿ ಪರಿಭಾವಿಸಬೇಕಾಗುತ್ತದೆ''[೧] ಏಕೆಂದರೆ ಆರಂಭದಲ್ಲಿ ನವೋದಯದ ವಿಮರ್ಶಕರು ವಿಮರ್ಶೆಯನ್ನು ಸಾಹಿತ್ಯದಿಂದ ಅಧಿಕೃತವಾಗಿ ಪ್ರತ್ಯೇಕ ಮಾರ್ಗವೆಂದು ಗ್ರಹಿಸಲಿಲ್ಲ. ಇವರು ವಿಮರ್ಶೆ ಮತ್ತು ಸಾಹಿತ್ಯ ಎರಡನ್ನೂ ಜತೆ ಜತೆಯಾಗಿಯೇ ತಮ್ಮ ಬರಹದ ಮೂಲಕ ನಿರ್ಮಾಣ ಮಾಡಿದರು. ಗೋವಿಂದ ಪೈ. ತಿ. ನಂ. ಶ್ರೀ, ಮಾಸ್ತಿ, ಕುವೆಂಪು, ಬೇಂದ್ರೆ, ವೀಸಿ, ಎಸ್.ವಿ.ರಂಗಣ್ಣ, ಸ.ಸ. ಮಾಳವಾಡ ರಾಜತ್ನಂ, ರಂ.ಶ್ರೀ ಮುಗಳಿ ಮುಂತಾದವರು ಪೂರ್ವ ಮತ್ತು ಪಶ್ಚಿಮ ವಿಮರ್ಶಾ ವಿಧಾನಗಳನ್ನು ಸಮನ್ವಯಗೊಳಿಸಿ ರೂಪ ಕೊಡುವ ಕಾರ್ಯದಲ್ಲಿ ಮುಂದಾದುದು ಕಂಡುಬರುತ್ತದೆ. ಇದು ನವೋದಯದ ಜರೂರು ಕೆಲಸ ಆಗಿತ್ತು.

ನವೋದಯ ಸಂದರ್ಭದಲ್ಲಿ ಸಮಕಾಲೀನ ಸಾಹಿತ್ಯಕ್ಕಿಂತ ಹಳಗನ್ನಡ ಸಾಹಿತ್ಯ ವಿಮರ್ಶೆಯೇ

---

೧. ಅರವಿಂದ ಮಾಲಗತ್ತಿ : ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ೨೦೦೪, ಪುಟ ೮

ಪ್ರಧಾನವಾಗಿತ್ತು. ಹಳಗನ್ನಡ ನಡುಗನ್ನಡಕ್ಕೆ ಹೋಲಿಸಿದರೆ ಹೊಸಗನ್ನಡ ವಿಮರ್ಶೆ ಗೌಣವೆಂದು ಹೇಳಬೇಕು. ಹಳೆಗನ್ನಡ ಅದರಲ್ಲೂ ದುರಂತ ನಾಯಕ ಅಥವಾ ನಾಯಕಿಯರ ಪಾತ್ರಗಳ ವಿಮರ್ಶೆಯೇ ಒಡೆದು ಕಾಣುತ್ತದೆ. ಇದಲ್ಲದೆ ವಸ್ತು ಅಥವಾ ವರ್ಣಕ ಪದ್ಧತಿ ಕಲ್ಪನಾ ಸಾಮರ್ಥ್ಯದ ಧೀನಶಕ್ತಿ, ಕವಿಯಿಂದ ಕವಿಗಿರುವ ಅಂತರ, ತೌಲನಿಕ ರೂಪ, ಸ್ಥಾನ, ನಿರ್ಣಯ ಇಂಥವು ಪ್ರಧಾನವಾಗಿ ವಿಮರ್ಶೆಗೆ ಒಳಗಾಗಿರುವುದನ್ನು ಕಾಣುತ್ತೇವೆ.

ನವೋದಯದಲ್ಲಿ ವಿಮರ್ಶೆ ಅಧಿಕೃತವಾಗಿ ಹಳಗನ್ನಡ ಮತ್ತು ನಡುಗನ್ನಡ ಸಾಹಿತ್ಯ ಕುರಿತಾಗಿದೆ. ವಿಮರ್ಶೆಯ ವ್ಯಾಪ್ತಿ ಅಧಿಕೃತವಾಗಿ ಹೊಸಗನ್ನಡ ವ್ಯಾಪ್ತಿಗೆ ಬರಲೇ ಇಲ್ಲ ಎನಿಸುತ್ತದೆ. ಇದಕ್ಕೆ ಕಾರಣಗಳಿವೆ. ನವೋದಯದ ಆರಂಭದ ಘಟ್ಟದಲ್ಲಿ ಹೊಸಗನ್ನಡ ಹೊಸ ಸಾಹಿತ್ಯ ಪ್ರಕಾರಗಳು ಹೊಸ ಉತ್ಸಾಹದಿಂದ ನುಗ್ಗಿದರೂ ಅಲ್ಲಿ ಸಾಹಿತ್ಯ ಪ್ರಕಾರಗಳ ಸ್ಪಷ್ಟತೆ ಇಲ್ಲದಿರುವುದರೊಂದಿಗೆ ಪ್ರಾರಂಭದಲ್ಲಿ ಪ್ರಯೋಗದ ಕಾಲವಾಗಿಯೇ ಎದುರಾಗುತ್ತದೆ. ಹೀಗಾಗಿ ಕಾವ್ಯ, ಕಾದಂಬರಿ, ನಾಟಕ, ಕಥೆಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ಗದ್ಯದಲ್ಲಿ ಪದ್ಯದ ಮಿಶ್ರಣವೂ ಒಂದು ಗುಣವಾಗಿಯೇ ಬರುವುದನ್ನು ಕಾಣುತ್ತೇವೆ. ಇಲ್ಲಿ ವಿಮರ್ಶೆಗಿಂತ ಪರಿಚಯ, ಮೆಚ್ಚುಗೆ, ರಸಾಸ್ವಾದನೆ, ಗುಣಗ್ರಹಣ, ಸುಲಭ ನಂಬಿಕೆ, ಅನುಭವದ ಸರಳೀಕರಣ ಇಂಥವನ್ನು ಪ್ರಧಾನವಾಗಿ ವ್ಯಕ್ತಪಡಿಸಲಾಗುತ್ತಿತ್ತು. ಅನಂತರದ ವಿಮರ್ಶ ಗ್ರಹಿಕೆಯಲ್ಲಿ ವ್ಯತ್ಯಾಸಗಳಾಗುವುದು ಕಂಡುಬರುತ್ತದೆ. ಮಾಸ್ತಿಯವರು ಒಂದೆಡೆ - ''ಇದು ಒಳ್ಳೆಯ ಪುಸ್ತಕ, ಇದು ಒಳ್ಳೆಯದಲ್ಲ ಎಂದು ನಿರ್ಧರಿಸುವುದೇ ಕಷ್ಟವಾಗಿದೆ. ಇವೆಲ್ಲವುಗಳನ್ನೆಲ್ಲ ಚರ್ಚೆ ಮಾಡಿ ಅವುಗಳ ಸಾಧುತ್ವವನ್ನು ನಿರ್ಧರಿಸುವುದು ಅವಶ್ಯವಾಗಿದೆ.''[೨] ಎಂದಿದ್ದಾರೆ. ಈ ತಿರುವೆ ವಿಮರ್ಶೆಯ ಕ್ಷೇತ್ರಕ್ಕೆ ಅಧಿಕೃತ ಪ್ರವೇಶವಾಗಿದೆ.

ನವೋದಯದ ಆರಂಭದಲ್ಲಿ ವಿಮರ್ಶೆಗೆ ಹೆಚ್ಚು ಒತ್ತು ಬೀಳದಿರಲು ಕಾರಣವೆಂದರೆ, ವಿಮರ್ಶೆಯ ಕ್ಷೇತ್ರವೂ ಹೊಸದಾಗಿ ಪ್ರವೇಶ ಪಡೆದಿದ್ದು, ಸಾಹಿತ್ಯ ಪ್ರಕಾರ ಅಷ್ಟಾಗಿ ಬೆಳೆಯದೇ ಇರುವುದು. ಇವೆಲ್ಲ ಒಂದು ಹಂತದಲ್ಲಿ ಬೆಳೆದು ನಿಂತಾಗ ವಿಮರ್ಶೆ ಸತ್ಯಕ್ಕಿಂತ ಮಾನವೀಯ ಮೌಲ್ಯಗಳೆಡೆಗೆ ಮುಖ ಮಾಡಿದ್ದು, ವರ್ತಮಾನದ ಸಾಹಿತ್ಯದ ಬಗ್ಗೆ ಆರಂಭದಲ್ಲಿ ವಿಮರ್ಶಿಸಲು ವಿಮರ್ಶಕರು ಮುಜುಗರ ತಾಳಿದ್ದು, ಸ್ನೇಹ, ಸೌಜನ್ಯಗಳು ಅಪ್ರತ್ಯಕ್ಷವಾಗಿ ಅಡ್ಡಿಯಾಗಿದ್ದವು. ಹೀಗಾಗಿ ಸಂಭವನೀಯ ಮತ್ತು ಅಸಂಭವನೀಯ ಪಾತ್ರ, ಘಟನೆ, ವರ್ಣನೆ, ಜೀವನ ತತ್ವದ ರೀತಿ-ನೀತಿ ಈ ಅಂಶಗಳೇ ಪ್ರಧಾನವಾಗಿ ವಿಮರ್ಶೆಯಲ್ಲಿ ಒಡೆದು ಕಾಣುತ್ತವೆ. ಕೃತಿಯ ವಿಮರ್ಶೆಗಿಂತ ಮುನ್ನುಡಿಗಳೇ ವಿಮರ್ಶೆಯ ಧೋರಣೆಗಳನ್ನು ಹೊತ್ತು ನಡೆದಿರುವುದು ಅಧಿಕವಾಗಿ ಕಾಣುತ್ತೇವೆ. ಸೃಜನ ಕೃತಿಗಳಿಗೆ ಬರೆದ ಪ್ರಸ್ತಾವನೆ ಮುನ್ನುಡಿಗಳಲ್ಲಿಯೇ ವಿಮರ್ಶೆಯ ಒಂದು

೨. ಅರವಿಂದ ಮಾಲಗತ್ತಿ : ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ೨೦೦೪, ಪುಟ೯

ಮುಖ ರೂಪುಗೊಳ್ಳುವಂತಾಯಿತು. ಅನಂತರದಲ್ಲಿ ಸಾಹಿತ್ಯ ಪತ್ರಿಕೆಗಳು, ದಿನಪತ್ರಿಕೆಗಳು ಭಾಗಿಯಾಗಿ ಅದರ ನಡಿಗೆಗಳನ್ನು ಗುರುತಿಸಬಹುದು. ವಿಚಾರ ಸಂಕಿರಣಗಳ ಸಂದರ್ಭದಲ್ಲಿ ವಿಮರ್ಶೆಗೆ ಹೆಚ್ಚು ಗಂಭೀರತೆ ಪ್ರಾಪ್ತವಾಯಿತು. ಇಲ್ಲಿಯ ಪ್ರಬಂಧಗಳೇ ಸಂಕಲಿತಗೊಂಡು ಕೃತಿ ರೂಪುತಾಳುವುದರೊಂದಿಗೆ ವಿಮರ್ಶೆಗೆ ಭದ್ರಬುನಾದಿಯನ್ನು ಒದಗಿಸಿಕೊಟ್ಟಂತೆ ಆಯಿತು. ''ಇಂಥ ಹೆಜ್ಜೆಗಳ ಕುರಿತು ಡಾ. ಹೆಚ್.ಎಸ್. ರಾಘವೇಂದ್ರರಾವ್ ಅವರು ಶತಮಾನದ ಸಾಹಿತ್ಯ ವಿಮರ್ಶೆ ಕೃತಿಯಲ್ಲಿ ದೀರ್ಘವಾಗಿ ಚರ್ಚಿಸಿದ್ದಾರೆ''[೩]. ಅನಂತರದಲ್ಲಿ ಪ್ರತ್ಯೇಕ ಮಾರ್ಗವಾಗಿ ವಿಮರ್ಶೆ ಬೆಳೆಯ ತೊಡಗಿತು. ವಿಮರ್ಶೆ, ವಿಮರ್ಶಕ, ವಿಮರ್ಶೆಯ ರೀತಿ-ನೀತಿ, ಕಾರ್ಯಗಳು ಇಂಥವುಗಳ ಬಗೆಗೆ ಚರ್ಚೆ, ವಾದಗಳೂ ನಡೆಯಿತು.

## ಕನ್ನಡದಲ್ಲಿ ವಿಮರ್ಶೆ

ಕನ್ನಡ ಸಾಹಿತ್ಯಕ್ಕೆ, ಬಹುಶಃ, ಭಾರತೀಯ ಸಾಹಿತ್ಯಕ್ಕೆ, ಹೊಸ ಜೀವ ಬಂದದ್ದು ಪಾಶ್ಚಾತ್ಯ ಸಾಹಿತ್ಯದ, ಅದರಲ್ಲೂ ಇಂಗ್ಲಿಷ್ ಸಾಹಿತ್ಯದ ಸಂಪರ್ಕ ಪ್ರಭಾವ, ಪ್ರಚೋದನೆಗಳಿಂದ ಕನ್ನಡದಲ್ಲಿ ಆಧುನಿಕ ಸಾಹಿತ್ಯ ಪ್ರಕಾರಗಳಾದ ಭಾವಗೀತೆ, ಕಾದಂಬರಿ, ಕಥೆ, ನಾಟಕ, ಪ್ರಬಂಧ ಇವುಗಳು ಇಂಗ್ಲಿಷ್ ಸಂಪರ್ಕದಲ್ಲೇ ಕನ್ನಡದಲ್ಲಿ ಬಂದವೆಂದು ಹೇಳಬೇಕು. ಆಧುನಿಕ ದೃಷ್ಠಿಯಲ್ಲಿ 'ಸಾಹಿತ್ಯ ವಿಮರ್ಶೆ' ಎಂದು ಯಾವುದನ್ನು ಕರೆಯುತ್ತೇವೆಯೋ ಅದು ಆಧುನಿಕ ಕಾವ್ಯ ಸೃಷ್ಠಿಯ ಜೊತೆಗೆ ಅಂಕುರಾರ್ಪಣೆ ಮಾಡಿತು. ಪ್ರಾಚೀನ ಭಾಗದಲ್ಲಿ ಸುಕವಿ ಪ್ರಶಂಸೆ, ಕುಕವಿನಿಂದೆ, ಕಾವ್ಯ ಸ್ವರೂಪ, ಗುಣಲಕ್ಷಣಗಳು ಇವುಗಳನ್ನು ಕುರಿತು ಕವಿಗಳು ಬರೆದಿರುವುದು ಲಭ್ಯವಿದೆ. ಅಷ್ಟನ್ನು ಬಿಟ್ಟರೆ ಆಧುನಿಕ ಅರ್ಥದಲ್ಲಿನ ವಿಮರ್ಶೆ ನಮಗೆ ಸಿಗುವುದಿಲ್ಲ. ''ಪಾಶ್ಚಾತ್ಯ ವಿಮರ್ಶೆ ಕನ್ನಡ ವಿಮರ್ಶೆಯ ಮೇಲೆ ಪ್ರಭಾವ ಬೀರಿತು ಎಂದು ಹೇಳುವುದಕ್ಕಿಂತ, ಅದು ಕನ್ನಡ ವಿಮರ್ಶೆಯ ಉಗಮಕ್ಕೆ ಕಾರಣವಾಯಿತು ಎಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು''[೪] ಎಂಬ ಮಾತು ಸತ್ಯವಾದುದು ಹೀಗೆ ಪ್ರಾರಂಭವಾದ ವಿಮರ್ಶೆ ಹಂತ-ಹಂತವಾಗಿ ಬೆಳೆಯಲಾರಂಭಿಸಿತು.

ಪ್ರಾರಂಭದ ಘಟ್ಟದಲ್ಲಿ ಅಂದರೆ ನವೋದಯ ವಿಮರ್ಶಕರು ರಸನಿಷ್ಠ ವಿಮರ್ಶೆಗೆ ಪ್ರಾಧಾನ್ಯತೆಯನ್ನು ನೀಡಿದರೆ. ನವ್ಯ ಕೃತಿನಿಷ್ಠ ವಿಮರ್ಶೆಗೆ ಮಹತ್ವ ಕೊಟ್ಟಿತು. ಇದರೊಂದಿಗೆ ಸ್ವರೂಪ ವಿಮರ್ಶೆ, ಪ್ರಾಯೋಗಿಕ ವಿಮರ್ಶೆಗಳೂ ಮಹತ್ವ ಪಡೆದುಕೊಂಡವು. ಆದರೆ ದಲಿತ ಬಂಡಾಯದಲ್ಲಿ ಸಮಾಜ ನಿಷ್ಠೆ, ಸಂಸ್ಕೃತಿ ನಿಷ್ಠೆ ಹಾಗೂ ಮಾರ್ಕ್ಸ್‌ವಾದಿ ವಿಮರ್ಶೆ ಮಹತ್ವ ಪಡೆದುಕೊಂಡವು. ಹೀಗೆ ಕನ್ನಡ ವಿಮರ್ಶೆಯ ಬೆಳವಣಿಗೆ ಹೊಂದುತ್ತಾ ಹೋಗಿದೆ. ಇಲ್ಲಿ ಸ್ವಂತಕ್ಕಿಂತ ಪರಾವಲಂಬಿ ಚಿಂತನೆಯ ಮೇಲೆಯೇ ವಿಮರ್ಶೆ ಬದುಕಿದ್ದು ಅಧಿಕ ಪಾಶ್ಚಾತ್ಯ ಚಿಂತನೆಯ ಮಾನದಂಡಗಳು ಮೂಲಾಧಾರವಾಗಿವೆ. ಆದರೆ ದಲಿತ ಬಂಡಾಯದ

೩. ಅರವಿಂದ ಮಾಲಗತ್ತಿ : ಕನ್ನಡ ವಿಮರ್ಶೆಯ ಮಾರ್ಗ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ೨೦೦೪, ಪುಟ ೧೦
೪. ಡಾ. ಎನ್.ಕುಮುದ : ಕನ್ನಡ ನವೋದಯ ಕಾವ್ಯ ವಿಮರ್ಶೆಯ ಮೇಲೆ ಪಾಶ್ಚಾತ್ಯ ವಿಮರ್ಶೆಯ ಪ್ರಭಾವ, ಚೇತನ ಬುಕ್ ಹೌಸ್, ೨೦೦೬, ಪುಟ ೪೦

ಸಂದರ್ಭದಲ್ಲಿ ನೆಲ ವಿಮರ್ಶೆ ಎದ್ದು ನಿಲ್ಲಲು ಪ್ರಯತ್ನಿಸಿತು. ನವ್ಯ ವಿಮರ್ಶೆ ವ್ಯಕ್ತಿನಿಷ್ಠವಾಗುತ್ತ ಹೋದಂತೆ, ದಲಿತ ಬಂಡಾಯ ಸಮೂಹ ನಿಷ್ಠವಾಗುತ್ತ ಹೋಯಿತು. ಹೀಗಾಗಿ ವಿಮರ್ಶೆಯೂ ಕೂಡ ಸಮಷ್ಠಿಯ ಪರಿಕಲ್ಪನೆಯ ಮಾನದಂಡಗಳನ್ನೇ ಅವಲಂಬಿಸಬೇಕಾಯಿತು.

ನವೋದಯದಲ್ಲಿ ಭಾವತಿರೇಕದಿಂದ ಪ್ರಕೃತಿ ವರ್ಣನೆ ಪ್ರಾಧಾನ್ಯತೆ ಪಡೆದರೆ, ನವ್ಯದಲ್ಲಿ ಚಿಂತನೆಗೆ ಆದ್ಯತೆ ಸಿಕ್ಕಿ ಅನುಭವ ಮತ್ತು ಭಾಷೆಗೆ ಹೆಚ್ಚು ಒತ್ತು ಬಿತ್ತು, ಇದೇ ರೀತಿ ದಲಿತ ಬಂಡಯದಲ್ಲಿ ಸಾಮಾಜಿಕ ಪ್ರಜ್ಞೆ ಮುಖ್ಯವಾಗಿ ಪ್ರತಿಭಟನೆಗೆ ಒತ್ತು ಬಿದ್ದಿತು. ಹೀಗಾಗಿ ಕೃತಿನಿಷ್ಠ ವಿಮರ್ಶೆ, ಪ್ರಾಯೋಗಿಕ ವಿಮರ್ಶೆಗಳು ನವ್ಯ ಬೆನ್ನಲುಬಾದರೆ ದಲಿತ ಬಂಡಾಯದಲ್ಲಿ ಸಮಾಜವಾದಿ ವಿಮರ್ಶೆ, ಮಾರ್ಕ್ಸ್‌ವಾಗಿ ವಿಮರ್ಶೆ, ಸ್ತ್ರೀವಾಗಿ ವಿಮರ್ಶೆಗಳು ಮುಖ್ಯವಾದವು. ನವ್ಯದಲ್ಲಿ ಮಧ್ಯಮ ವರ್ಗದ ಮೌಲ್ಯಗಳು ಸಮಸ್ಯೆಗಳು, ಆಸೆ-ಆಕಾಂಕ್ಷೆಗಳು ಏಕರೂಪಿಯಾಗಿ ಮೈದಾಳಿದರೆ ದಲಿತ ಬಂಡಾಯದಲ್ಲಿ ಕೆಳವರ್ಗದ ಬದುಕಿನ ಸ್ಥಿತಿ, ಜೀವನ ಮೌಲ್ಯಗಳು, ಸಾಮಾಜಿಕ, ಧಾರ್ಮಿಕ, ರಾಜಕೀಯ ಪರಿಣಾಮಗಳು ಬಹುರೂಪಿಯಾಗಿ ಮೈದಾಳುತ್ತವೆ. ನವೋದಯ ಆದರ್ಶವಾದಿ ತಿಳುವಳಿಕೆಯನ್ನು ವಿರೋಧಿಸಿದ ದಲಿತ, ಬಂಡಾಯ ಮತ್ತೊಂದು ನೆಲೆಯ ಆದರ್ಶವಾದವನ್ನು ನೆಚ್ಚಿಕೊಂಡಿತು. ಆದರೆ ನವ್ಯವೂ ಇದರಿಂದ ಹೊರತಾಗಲಿಲ್ಲ.

ಕನ್ನಡದಲ್ಲಿ ವಿಮರ್ಶೆಯ ನಿಜಸಾಮರ್ಥ್ಯ ವ್ಯಕ್ತವಾದದ್ದು ನವ್ಯ ಪಂಥದಲ್ಲಿ, ವಿಮರ್ಶೆಯ ಹರವು, ಇತಿ-ಮಿತಿ-ಸೂಕ್ಷ್ಮತೆ, ಭಾಷೆಯ ಮಹತ್ವ ಅರ್ಥಸಾಧ್ಯತೆ ಇಂಥ ಹತ್ತು ಹಲವಾರು ನೆಲೆಗಳಿಂದ ವಿಮರ್ಶೆ ಕನ್ನಡದಲ್ಲಿ ಚಿತ್ತಾರಗೊಂಡಿತು. ಈ ವಿಮರ್ಶೆಯ ಸೂಕ್ಷ್ಮತೆ, ಸಾಹಿತ್ಯ ಮಾರ್ಗವನ್ನು ಮತ್ತಷ್ಟು ಬಲಗೊಳಿಸುವದರೊಂದಿಗೆ ಬೆಳೆಯಲು ಕಾರಣವಾಗಿದೆ. ಹೀಗಾಗಿ ಅನುಭವದ ಶೋಧನೆಯೊಂದಿಗೆ ಸಾವಯವ ಸಾಮಗ್ರಿಕರಣದ ಸಾಹಿತ್ಯ ಎಂದರೆ ಆಧುನಿಕತೆ, ನಗರ ಮತ್ತು ಗ್ರಾಮ ಪ್ರಜ್ಞೆ, ಕಾಮ, ಇಂತಹ ಮುಖ್ಯವಾಗುವುದರೊಂದಿಗೆ ಪರಂಪರೆ ಮತ್ತು ಭಾಷೆ ಮುಂತಾದವು ಪ್ರಾಧಾನ್ಯತೆ ಪಡೆದವು. ವಿಮರ್ಶೆಯ ಸಂದರ್ಭಗಳಲ್ಲಿ ಕೃತಿಯ ಸ್ವರೂಪ, ಭಾಷೆ, ಬಂಧ, ಕಥನದ ವಿಶ್ಲೇಷಣೆ ವ್ಯಕ್ತಿ ಮತ್ತು ಸಾಹಿತ್ಯ, ಸಮಾಜದ ಸಂಬಂಧದ ಸ್ವರೂಪ ಅನುಭವದ ಪ್ರಾಮಾಣಿಕತೆ ಮತ್ತು ಅಪ್ರಮಾಣಿಕತೆ, ಸಾಹಿತ್ಯಕ ಹಾಗೂ ಸಾಮಾಜಿಕ ನೆಲೆಯ ಪ್ರಸ್ತುತತೆ ಹಾಗೂ ಅಪ್ರಸ್ತುತತೆ ವಿಮರ್ಶೆಯ ವ್ಯಾಪ್ತಿಯಲ್ಲಿ ಸೇರಿಕೊಂಡಿತು.

ಕನ್ನಡ ವಿಮರ್ಶೆ ಸಂಶೋಧನೆ ಮತ್ತು ಸಾಹಿತ್ಯ ಚರಿತ್ರೆಯ ಜೊತೆ ಜೊತೆಗೆ ಬೆಳೆದುಬಂದಿದೆ. ಹೊಸಗನ್ನಡದ ಸಾಹಿತ್ಯ ಸಂಪತ್ತು ಹೇರಳವಾಗಿ ಬಂದಿರುವ ಸಂದರ್ಭದಲ್ಲಿ ಸಂಶೋಧನೆ ಪ್ರಧಾನವಾಗಿ ಹಳಗನ್ನಡ ಮತ್ತು ನಡುಗನ್ನಡಕ್ಕೆ ಒತ್ತು ಬಿತ್ತು. ಈ ಸಾಹಿತ್ಯ ಸಂಗ್ರಹದೊಂದಿಗೆ ಚರಿತ್ರೆಯ ಹಾದಿಯೂ ತೆರೆಯಿತು. ಈ ಎರಡರ ನಡುವೆ ವಿಮರ್ಶೆ ಅಧಿಕೃತವಾಗಿ ಬೆಳೆದಿರುವುದು ಕಂಡುಬರುತ್ತದೆ. ಕೃತಿಯ ಸಾರ ಅಥವಾ ಪರಿಚಯ ರಸಾನುಭವದ ಅಭಿವಯಕ್ತಿ ಕಾವ್ಯಮಯ ಭಾಷೆ, ಕೃತಿಯ ಮೌಲ್ಯ ನಿರ್ಣಯಗಳಂಥವು

ಹೆಚ್ಚಾಗಿ ರಾಚುತ್ತವೆ. ಪ್ರಾರಂಭದ ಕನ್ನಡ ವಿಮರ್ಶೆಗೆ ಸಂಬಂಧಿಸಿದಂತೆ ನೆನಪಿಡಬೇಕಾದ ಅಂಶವೆಂದರೆ ಅಂದಿನ ಸಂದರ್ಭದಲ್ಲಿ ಕೃತಿಯ ಕುರಿತು ಓದುಗರಿಗೆ ಮೆಚ್ಚುಸುವಂತ ಬರಹ ಪ್ರಧಾನವಾಗಿತ್ತು ಮತ್ತು ಪರಂಪರೆಯ ಬಗ್ಗೆ ಪ್ರೀತಿಯನ್ನು ಹೆಚ್ಚಿಸಿ ಓದುಗ ವರ್ಗವನ್ನು ಸೃಷ್ಟಿಸಿಕೊಳ್ಳುವ ಪ್ರಕ್ರಿಯೆ ಪ್ರಧಾನವಾಗಿತ್ತು.

## ಡಿ.ವಿ.ಜಿ.ಅವರ ''ಜೀವನ ಸೌಂದರ್ಯ ಮತ್ತು ಸಾಹಿತ್ಯ''

ಡಿವಿಜಿಯವರು ಕನ್ನಡದ ಕೆಲವೇ ಮೇಧಾವಿಗಳಲ್ಲೊಬ್ಬರಾಗಿದ್ದಾರೆ. ಸಾಹಿತ್ಯವಲ್ಲದೆ ತತ್ವಜ್ಞಾನಿ, ರಾಜಕಾರಣಿ, ಸಮಾಜಶಾಸ್ತ್ರಗಳೂ ಇವರ ಮೆಚ್ಚಿಗೆಯ ವಿಷಯಗಳಾಗವೆ. ಹೀಗಾಗಿ ಆಯಾ ಕ್ಷೇತ್ರಗಳಲ್ಲಿಯ ತಿಳುವಳಿಕೆಯನ್ನು ಅವರು ಸಾಹಿತ್ಯ ವಿಮರ್ಶೆಯಲ್ಲಿಯೂ ತಂದರು. ಸಾಹಿತ್ಯದಲ್ಲಿರುವಂತೆ ವಿಮರ್ಶೆಯಲ್ಲಿಯೂ ಇವರದು ಮಾರ್ಗ ಸಂಪ್ರದಾಯವಾಗಿದೆ. ಸಾಹಿತ್ಯದ ಸ್ವರೂಪವನ್ನು ಕುರಿತು ಇವರು ಕೊಟ್ಟಿರುವ ವಿವೇಚನೆಯೆಲ್ಲ ಈ ಬಗೆಯದಾಗಿದೆ. 'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಹಾಗೂ 'ಸಾಹಿತ್ಯ ಶಕ್ತಿ' ಈ ಗ್ರಂಥಗಳೆರಡನ್ನು ನೋಡಿದಾಗ ಈ ಮಾತು ಸ್ಪಷ್ಟವಾಗುತ್ತದೆ.

'ಜೀವನ ಸೌಂದರ್ಯ ಮತ್ತು ಸಾಹಿತ್ಯ' ಕೃತಿಯಲ್ಲಿ ಒಟ್ಟು ಆರು ಪ್ರಕರಣಗಳಿವೆ. ಇವು ಬೇರೆ-ಬೇರೆ ಸಂದರ್ಭದಲ್ಲಿ ಹುಟ್ಟಿದವು. ಅವುಗಳಲ್ಲಿ ಮೊದಲನೆಯ ಮೂರು ಪ್ರಕರಣಗಳು ಮಹಾಜನ ಸಭೆಗಳಿಗೆ ಬಿನ್ನಹವಾದವು. ಉಳಿದ ಮೂರರಲ್ಲಿ ಎರಡು ''ಪ್ರಬುದ್ಧ ಕರ್ನಾಟಕ'' ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಕೊನೆಯದು ಈ ಕೃತಿಯಲ್ಲಿ ಮೊದಲ ಬಾರಿ ಅಚ್ಚಾಗಿದೆ.

## ಕೆಲವು ಸಾಹಿತ್ಯ ಸಮಸ್ಯೆಗಳು

1932ರ ಡಿಸೆಂಬರ್ 28ರಂದು ಮಡಿಕೇರಿಯಲ್ಲಿ ನಡೆದ ಹದಿನೆಂಟನೆಯ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಡಿವಿಜಿ ರವರು ಮಾಡಿದ ಉಪನ್ಯಾಸವೇ 'ಕೆಲವು ಸಾಹಿತ್ಯ ಸಮಸ್ಯೆಗಳು'. ಕರ್ನಾಟಕಕ್ಕೊಂದು ಇತಿಹಾಸವಿದೆ. ಸಾವಿರ ವರ್ಷಗಳಿಂದ ಹರಿದು ಬಂದಿರುವ ಸಾಹಿತ್ಯಧಾರೆಯು ಸುಲಭವಾಗಿ ಸಾಯುವುದಿಲ್ಲ. ಈ ಮಾತನ್ನು ಕನ್ನಡಿಗರು ಮತ್ತು ಇತರ ಭಾಷಿಗರೂ ಅರಿಯಬೇಕು. ಏಕೆಂದರೆ ಈಗ ಭಾಷಿಗರ ಹೋರಾಟ ನಡೆಯುತ್ತಿದೆ. ಎಲ್ಲರೂ ತಮ್ಮಗಳ ಭಾಷೆಯೇ ಹಿರಿದೆನ್ನುತ್ತಾರೆ. ಇತರ ಭಾಷೆಗಳ ಬೆಂಬಲ ಪಡೆದು ಕನ್ನಡವನ್ನು ದೊಡ್ಡದನ್ನಾಗಿ ಮಾಡಬೇಕು. ಕೆಲಮಂದಿ ಕನ್ನಡಕ್ಕೂ ಸಂಸ್ಕೃತಕ್ಕೂ ಪೋಟಾಪೋಟಿ ಕಟ್ಟಿಸಿ ಕನ್ನಡದವರು ಸಂಸ್ಕೃತ ವಿರೋಧಿಗಳೆಂದು, ಸಂಸ್ಕೃತವಿಲ್ಲದ ಕನ್ನಡ ಇರಲಾರದೆಂದು ಹೇಳುತ್ತಿದ್ದಾರೆ. ಈಗ ಸಂಸ್ಕೃತದ ಸ್ಥಿತಿ ಹೇಗಿದೆ ಎಂದರೆ ಡಿವಿಜಿ ಹೇಳುವಂತೆ ''ಮಾಡಬೇಕಾದುದನ್ನು ಮಾಡಿದ್ದಾಯಿತು, ಪಡೆಯಬೇಕಾದದುದನ್ನು ಪಡೆದದ್ದಾಯಿತು ಇನ್ನೇನುಳಿದಿದೆ?''[೧] ಎಂಬುದು ಅದರ ಸ್ಥಿತಿ ಅಂದರೆ ಇನ್ನು ಮುಂದೆ ಸಂಸ್ಕೃತದ ಮೇಲಣ

೧. ಡಿ.ವಿ.ಜಿ. : ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೪

ಜೀವನವು ಕನ್ನಡದ ಮೂಲಕ ನಡೆಯಬೇಕಾಗಿದೆ ಬಸವಣ್ಣ, ಅಲ್ಲಮರುಗಳಿಂದಲೂ ಕನಕ ಪುರಂದರುಗಳಿಂದಲೂ ಆಗಿರುವಷ್ಟು ವೇದಾಂತ ತತ್ವಪ್ರಚಾರವು ಅನೇಕ ಉಪನಿಷದ್ವ್ಯಾಖ್ಯಾತರುಗಳಿಂದ ಆಗಿಲ್ಲವೆಂದು ಧಾರಾಳವಾಗಿ ಹೇಳಬಹುದು. ಸಂಸ್ಕೃತವಾಗಲಿ, ಇಂಗ್ಲಿಷ್ ಆಗಲಿ, ಜರ್ಮನ್, ಲ್ಯಾಟಿನ್ ಹೀಗೆ ಯಾವ ಭಾಷೆಯಾಗಲಿ ಅವಶ್ಯಕತೆ, ಔಚಿತ್ಯ ಎಂಬ ತತ್ವಗಳನ್ನು ಅನುಸರಿಸಿ ಪದಸಂಗ್ರಹ ಮಾಡಬಹುದು. ಆಗ ಸಾಹಿತ್ಯವು ಸಮೃದ್ಧವಾಗಿ ಬೆಳೆಯುತ್ತದೆ. ಹೀಗೆ ಅನ್ಯ ಸಾಹಿತ್ಯ ಸಂಸರ್ಗದಿಂದಾಗಿ ಕನ್ನಡ ಸಾಹಿತ್ಯವು ಒಂದು ನವೀನ ಕಾಂತಿಯನ್ನು ಶಕ್ತಿಯನ್ನು ಸಂಪಾದಿಸಿಕೊಳ್ಳುತ್ತಾ ಬಂದಿದೆ.

ಕಾವ್ಯವು ನಮ್ಮ ಅಂತರಂಗದ ವ್ಯಾಪಾರವಾಗಿದೆ. ನಮ್ಮ ಗಮನವನ್ನು ಹಿಡಿಯುವ ರೀತಿಯಲ್ಲಿ ತೋರಿಸಿಕೊಡುವುದೇ ಕಾವ್ಯದ ಕೆಲಸ. ಈ ಪ್ರಪಂಚದಲ್ಲಿ ನಮ್ಮ ಕಣ್ಣಿಗೆ ಬೀಳದ ಆಕಾರವಿಕಾರಗಳು ಕವಿಯ ಅಂತಃಕರಣದ ಕನ್ನಡದಲ್ಲಿ ಪ್ರತಿಬಿಂಬಿಸುತ್ತವೆ. ಕವಿ ಮತ್ತು ವಿಜ್ಞಾನಿ ಇಬ್ಬರೂ ವಿಶ್ವಸತ್ಯದ ರೂಪಗಳನ್ನು ಹೊಸಹೊಸದಾಗಿ ಹುಡುಕಿ, ಜೀವನ ಸೌಂದರ್ಯಗಳನ್ನು ಹೊಸಹೊಸದಾಗಿ ಸಂಪಾದಿಸಿ ಹೊರಟವರಾಗಿದ್ದಾರೆ. ಡಿವಿಜಿಯವರ ಅಭಿಪ್ರಾಯದಲ್ಲಿ ಒಬ್ಬನ ಆಳಿಕೆ ನಮ್ಮ ಮನಸ್ಸಿನ ಮೇಲೆ ಆದರೆ ಇನ್ನೊಬ್ಬನದು ನಮ್ಮ ಮೈಯಮೇಲೆ.

ವಚನಕಾರರನ್ನು ಡಿವಿಜಿ ಅತಿಮಾನುಷ್ಯ ಕವಿಗಳೆಂದು ಕರೆಯುತ್ತಾರೆ. ಇವರ ಮೇಲಿನ ಅಭಿಮಾನದಿಂದ ಇಂದಿನ ಲೇಖಕರಲ್ಲಿ ಬೇಡಿಕೆಯೊಂದನ್ನು ಇಡುತ್ತಾರೆ. ಅದೆಂದರೆ ಸಾಮಾನ್ಯ ಜನರಿಗೂ ಅರ್ಥವಾಗುವ ಸಣ್ಣಕತೆಗಳ ಜೊತೆಗೆ ದೊಡ್ಡ ಕಥೆಗಳೂ ಬೇಕು. ಯಂತ್ರಗಳು, ರಸಾಯನ ದ್ರವ್ಯಗಳು ಇವುಗಳನ್ನು ಕುರಿತು ಸಣ್ಣಕತೆಗಳು ಬೇಕೆಂದು ಡಿವಿಜಿ ಬಯಸುತ್ತಾರೆ. ಹೀಗೆ ಸಾಹಿತ್ಯ ಗುಣವು ಮುಖ್ಯವಾಗಿ ಜನಜೀವನ ಗುಣದ ಪ್ರತಿಫಲವಾಗಬೇಕು. ಲೇಖಕನಿಗೆ ಬೇಕಾಗಿರುವ ಕಾವ್ಯ ಹುರುಪು ಅವನ ಸುತ್ತಲಿನ ಸನ್ನಿವೇಶಗಳಿಂದಲೇ ದೊರೆಯಬೇಕು. ಜನವಿದ್ದಂತೆ ಸಾಹಿತ್ಯವಾಗಬೇಕು. ಆದಕಾರಣ ಕನ್ನಡಿಗರು ತಮ್ಮ ಬಾಳನ್ನು ತಿದ್ದಿಕೊಂಡು, ಅದಕ್ಕೊಂದು ಹೊಸತನವನ್ನು ತಂದುಕೊಳ್ಳಬೇಕು. ಇದರಿಂದ ರಚಿತವಾದ ಕೃತಿಯನ್ನು ಗ್ರಹಿಸಲು ಕಾವ್ಯ ವಾಚಕರು ವಿಶಾಲವಾದ ಸರ್ವತೋಮುಖವಾದ ಗ್ರಹಣ ಶಕ್ತಿಯನ್ನು ಸಂಪಾದಿಸಬೇಕು. ಕಣ್ಣುಳ್ಳ ವಾಚಕನಿಗೆ ಮಾತ್ರ ಕಾವ್ಯ ಪರ್ವತಾರೋಹಣ ಸಾಧ್ಯವಾಗುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಗೆ ಆಧಾರಸ್ತಂಭರಾಗಿದ್ದ ಶ್ರೀಮಾನ್ ಕರ್ಪೂರ ಶ್ರೀನಿವಾಸರಾಯರವರು ಕಾಲವಶರಾದುದನ್ನು ಈ ಸಂದರ್ಭದಲ್ಲಿ ಡಿವಿಜಿ ನೆನೆಸಿಕೊಳ್ಳುತ್ತಾರೆ. ಮುಂದವರಿದ ಡಿವಿಜಿ ಮೈಸೂರು ಸರ್ಕಾರದವರು ಇಂಗ್ಲಿಷ್ ಕನ್ನಡ ನಿಘಂಟುವೊಂದನ್ನು ತಯಾರಿಸುತ್ತಿರುವ ಕಾರ್ಯವನ್ನು ಮೆಚ್ಚಿಕೊಳ್ಳುತ್ತಾರೆ. ಅಲ್ಲದೆ ಹರಕುಮುರುಕಾಗಿ ಒಡೆದು ಹೋಗಿರುವ ಕನ್ನಡ ನಾಡನ್ನು ಮತ್ತೆ

ಒಂದುಗೂಡಿಸದಿದ್ದರೆ ನಮ್ಮ ಜನಕ್ಕೆ ಮತ್ತು ಭಾಷೆಗೆ ಏಳಿಗೆಯಾಗದೆಂಬ ಎಚ್ಚರಿಕೆಯನ್ನು ಕೊಡುತ್ತಾರೆ. ನಮ್ಮಲ್ಲಿ ಹಳೆಯ ಪಾಂಡಿತ್ಯವು ಕಡಿಮೆಯಾಗುತ್ತಿದೆ. ಅದರದು ತುಂಬಾ ಬೆಲೆಯುಳ್ಳದ್ದಾಗಿದ್ದು, ಅದು ನಮಗೆ ಅವಶ್ಯಕವಾಗಿ ಬೇಕು ಎನ್ನುವ ಡಿವಿಜಿ ನಮ್ಮ ಪರಿಷತ್ತು ಕನ್ನಡ ಪಠ್ಯಪುಸ್ತಕಗಳ ಕಡೆಗೂ ಪಾಠಕ್ರಮಗಳ ಕಡೆಗೂ ಹೆಚ್ಚು ಗಮನಕೊಡಬೇಕು ಎನ್ನುತ್ತಾರೆ. ಕನ್ನಡ ಭಾಷೆ, ಸಾಹಿತ್ಯಗಳ ಸ್ಥಿತಿಯನ್ನು ಚೆನ್ನಾಗಿಸುವುದಕ್ಕೂ, ಕೆಡಿಸುವುದಕ್ಕೂ ಶಕ್ತಿಯಿರತಕ್ಕ ಇತರ ಜನವರ್ಗಗಳಲ್ಲಿ ಮುಖ್ಯರಾದ ವೃತ್ತಪತ್ರಿಕೋದ್ಯೋಗಿಗಳು, ರಾಜ್ಯವಿಚಾರಿಗಳು, ಸರಕಾರದ ಇಲಾಖೆಯವರು ಮತ್ತು ಹೆಂಗಸರು ಎಂದು ಗುರುತಿಸುತ್ತಾರೆ. ಕನ್ನಡಕ್ಕಾಗಿ ಕೆಲಸಮಾಡುವ ಸಂಸ್ಥೆಗಳು ಕರ್ನಾಟಕದ ಒಳಗೆ ಮತ್ತು ಹೊರಗೆ ಕಾರ್ಯನಿರತವಾಗಿವೆ. ಇವುಗಳ ವಿವರಗಳನ್ನು ತರಿಸಿ ಕಾರ್ಯಕ್ರಮಗಳನ್ನು ಪರಿಷ್ಕರಿಸಿ, ಅವುಗಳಿಗೆ ಬೆಂಬಲಕೊಡಬೇಕೆಂದು ಕನ್ನಡ ಸಾಹಿತ್ಯ ಪರಿಷತ್ತಿಗೆ ಸಲಹೆಯನ್ನು ಕೊಡುತ್ತಾರೆ.

## ಸಾಹಿತ್ಯ ಮತ್ತು ವಿಜ್ಞಾನ

1928ರ ಸೆಪ್ಟೆಂಬರ್ 3ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಆಶ್ರಯದಲ್ಲಿ ಕೊಟ್ಟ ಸಂವತ್ಸರಾರಂಭದಲ್ಲಿ ಮಾಡಿದ ಭಾಷಣ ಇದಾಗಿದೆ.

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕು, ಒಳ್ಳೊಳ್ಳೆಯ ಗ್ರಂಥಗಳು ಹುಟ್ಟುವಂತೆ ಮಾಡಬೇಕು ಎಂಬ ನಮ್ಮ ಉದ್ದೇಶವನ್ನು ಸಾಧಿಸಲು ಕೆಲವು ವರ್ಷಗಳಿಂದ ಕರ್ನಾಟಕ ಸಂಘ ಕೆಲಸ ಮಾಡುತ್ತಿದೆ. ಸಾಹಿತ್ಯೋತ್ಪತ್ತಿಗೆ ಬೇಕಾದ ಕೆಲಸಗಳು ನಡೆಯುತ್ತಿದ್ದರೂ, ಜೀವಕಳೆಯಿಂದ ಕಳಕಳಿಸುವ ಮಹಾಕಾವ್ಯಗಳು ಹುಟ್ಟಲು ಉತ್ತಮ ಸನ್ನಿವೇಶಗಳು ಬೇಕಾದಷ್ಟಿಲ್ಲ ಎಂದು ವಿಷಾದ ವ್ಯಕ್ತಪಡಿಸುತ್ತಾರೆ. ಸಾಹಿತ್ಯವೆಂಬುದು ಎಂಥಾದ್ದು ? ಅದರ ಸ್ವಭಾವವೇನು ? ಎಂಬುದನ್ನು ಕುರಿತು ಭಾರತೀಯ ಹಾಗೂ ಪಾಶ್ಚಾತ್ಯ ವಿದ್ವಾಂಸರಲ್ಲಿ ಚರ್ಚೆ ನಡೆದಿದೆ. ಈ ವಿಷಯದಲ್ಲಿ ಒಂದು ಪಕ್ಷದವರು ಕಾವ್ಯವು ಸಂತೋಷವನ್ನು ನೀಡುತ್ತದೆ ಎಂದು ಹೇಳಿದರೆ, ಮತ್ತೊಂದು ಪಕ್ಷದವರು ಕಾವ್ಯವು ಕೇವಲ ವಿನೋದ ನೀಡುವುದು ಮಾತ್ರವಲ್ಲ. ಅದಕ್ಕಿಂತ ಮಿಗಿಲಾದ ಉದ್ದೇಶವನ್ನು ಹೊಂದಿದೆ ಎನ್ನುತ್ತಾರೆ. ಒಟ್ಟಾರೆ ಕಾವ್ಯವು ಕೇವಲ ವಿನೋದಪ್ರಾಯವಲ್ಲ. ತನ್ನ ಜನರು ಲೋಕದಲ್ಲಿ ಶ್ರೇಯಸ್ಕರವಾದ ರೀತಿಯಲ್ಲಿ ಬಾಳಬೇಕಾದಾರೆ ಅವರ ಮನೋವೃತ್ತಿ ಜೀವನಕ್ರಮಗಳು ಉತ್ತಮವಾಗಬೇಕು. ದೇಶದಲ್ಲಿರತಕ್ಕ ಪಾಪ, ದೋಷ, ಅಜ್ಞಾನ, ದುಃಖ ಇವುಗಳ ನಾಶಕ್ಕೆ ಸಹಾಯವಾಗುವ ಕತ್ತಿಯೂ ಆಗಿದೆ. ''ಕಾವ್ಯಪಾಠವು ದೊಂಬರ ಆಟವಲ್ಲ. ಅದು ಉತ್ತಮವಾದ ಜೀವನಮಾರ್ಗದ ಒಂದು ಅತ್ಯುತ್ತಮಭಾಗ''[೨]. ಇದಕ್ಕೆ ತಕ್ಕಂಥ ಗ್ರಂಥಗಳು ನಮ್ಮ ಭಾಷೆಯಲ್ಲಿ ಇನ್ನೂ ಹುಟ್ಟಬೇಕು. ಕಾವ್ಯವು ಜನಜೀವನವನ್ನು ಪ್ರತಿಬಿಂಬಿಸಬೇಕು. ಕವಿಯು ಜನಜೀವನದ ರಹಸ್ಯವನ್ನು

---

೨. ಡಿ.ವಿ.ಜಿ. : ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೩

ಉಳಿದವರಿಗಿಂತ ಮುಂಚೆಯೇ ಬಿಡಿಸಿ ನೋಡಿ ಅರಿತಿರುವವನಾಗಬೇಕು. ಮಹಾಕಾವ್ಯವು ಭೂತ ಭವಿಷ್ಯತ್ತುಗಳೆರಡನ್ನು ವರ್ತಮಾನಪ್ರಸಂಗದಲ್ಲಿ ಸುರಿಸುವ ಕೆಲಸ ಮಾಡಬೇಕು. ಲೋಕವು ಕಷ್ಟದಿಂದ ಕೂಡಿದ್ದು, ಸಮಾಜ ವ್ಯವಸ್ಥೆಯು ಅನ್ಯಾಯಗಳ ಬೀಡಾಗಿದೆ ಎಂದು ಎಲ್ಲಾ ದೇಶಗಳ ವಿಚಾರಿಗಳು ಹೇಳಿದ್ದಾರೆ. ಆದರೆ ಮನುಷ್ಯನು ಅನುಸರಿಸಬೇಕಾದ ನೀತಿಯ ವಿಚಾರವಾಗಿ ಅವರಲ್ಲಿ ಅಭಿಪ್ರಾಯಗಳು ಬೇರೆ - ಬೇರೆಯಾಗಿದೆ. ಇದನ್ನು ಡಿವಿಜಿ ಮೂರು ಜಾತಿಗಳಾಗಿ ವಿಂಗಡಿಸಿದ್ದಾರೆ.

ಮೊದಲನೆಯದು ಉಮರ್‌ಖಯ್ಯೂಂ ಕವಿಯ ಮತದಂತೆ ''ಈ ಪ್ರಪಂಚ ಅನಿತ್ಯ, ನಮ್ಮ ದೇಹ ಶಾಶ್ವತವಲ್ಲ, ಲೋಕದಲ್ಲಿ ದುಃಖವೇ ಹೆಚ್ಚು : ಸೃಷ್ಠಿಯಲ್ಲಿ ಸತ್ಯವೆತ್ತಲೆಂದು ಎಷ್ಟು ಹುಡುಕಿದರೂ ಸಿಕ್ಕುವುದಿಲ್ಲ''[೩] ಎಂಬ ನಿರಾಶೆಯ ಮತ, ಎರಡನೆಯ ಜೀವನ ಮತ ''ಜನ್ಮಾಂತಕರ ಕರ್ಮವೇ ಪ್ರಬಲವಾದದ್ದು, ಅದರಿಂದ ಬರುವುದು ಹೇಗಾದರೂ ಬರಲೇಬೇಕು. ಯಾವುದು ಹೇಗೆ ಹೇಗೆ ನಡೆಯಬೇಕೋ ಅದನ್ನು ವಿಧಿ ಹಿಂದೆಯೇ ಗೊತ್ತುಮಾಡಿಟ್ಟಿದೆ. ನಾವು ತಿದ್ದುತ್ತೇವೆಂದು ಹೋರಟರೆ ಫಲವಿಲ್ಲ. ಅದೃಷ್ಟದ ಮುಂತೆ ನಮ್ಮ ಪ್ರಯತ್ನವೇ? ಆದ್ದರಿಂದ ಎಲ್ಲೋ ಪ್ರಾಣಿ ಸುಮ್ಮನೆ ಇದ್ದು ಬಿಡು ! ಪೇಚಾಡಬೇಡ''[೪] ಮೂರನೆಯದು ಪಾಶ್ಚಾತ್ತ್ಯರಲ್ಲಿ ಈಗ ಪ್ರಬಲಿಸಿರುವ ಪೌರುಷವಾದ ಅಥವಾ ಮಾನುಷ್ಯ ಯತ್ನವಾದ' ಎಂಬ ಮತಃ ಎಂದು ಡಿವಿಜಿ ವಿಂಗಡಿಸಿ ವಿವರಿಸುತ್ತಾರೆ.

ಈ ವಿಶ್ವ ಪ್ರಪಂಚದ ನಾನಾ ಭಾಗಗಳನ್ನೆಲ್ಲಾ ಚೆನ್ನಾಗಿ ಪರೀಕ್ಷಿಸಿ, ಸೃಷ್ಠಿ ರಹಸ್ಯಗಳನ್ನರಿತುಕೊಂಡು ಜೀವನ ವಿಧಾನವನ್ನು ಉತ್ತಮಗೊಳಿಸಬೇಕೆಂಬುದು ವಿಜ್ಞಾನದ ಪ್ರಯತ್ನ. ವಿಜ್ಞಾನದ ಜೀವಾಳವಿರುವುದು ಪರೀಕ್ಷೆ, ಸಂಶೋಧನೆ ಸ್ವತಂತ್ರಬುದ್ಧಿ ಮತ್ತು ಪರಿಶ್ರಮದಲ್ಲಿ. ಹಿಂದೆ ನಮ್ಮ ಕಾವ್ಯಗಳಲ್ಲಿ ರಾಜಕುಮಾರರ ವಿರಹ, ದಿಗ್ವಿಜಯ, ಅಲ್ಲಲ್ಲಿ ವರ್ಣನೆ, ನಡುವೆ ಧರ್ಮೋಪದೇಶ ಇವುಗಳೇ ವಸ್ತುವಾಗಿದ್ದಾಗ, ವಿಜ್ಞಾನ ಪ್ರವಾಹ ಬಂದು ನಮ್ಮ ಕಾವ್ಯ, ನಾನಾ ವಿಧದ ಗದ್ಯ ಪ್ರಬಂಧಗಳಿಗೆ ಬೇಕಾದಷ್ಟು ಸಾಮಗ್ರಿಯನ್ನು ಒದಗಿಸಿದೆ. ವಿಜ್ಞಾನದಿಂದ ನಮಗಾಗಿರುವ ಪ್ರಯೋಜನಗಳನ್ನು ಡಿವಿಜಿ 'ನಾಲ್ಕು ದೃಷ್ಟಾಂತಗಳು' ಎಂಬ ಶೀರ್ಷಿಕೆಯಡಿ ಕೊಡುತ್ತಾರೆ. ಮೊದಲನೆಯದು ವಿಜ್ಞಾನದಿಂದ ದೇಹಬಲದ ವೆಚ್ಚವನ್ನು ಕಡಿಮೆಮಾಡಿ, ಸಮಯ ಉಳಿಸಿಕೊಟ್ಟಿದೆ. ಎರಡನೆಯದಾಗಿ ಪ್ರಜಾಜನಪ್ರಾಬಲ್ಯ ವಿಜ್ಞಾನದ ಫಲದಿಂದ ದೇಶದ ಅಭಿವೃದ್ಧಿಯಲ್ಲಿ ಎಲ್ಲರೂ ಪಾಲ್ಗೊಳ್ಳುತ್ತಾರೆ. ಮೂರನೆಯದು ವಿಜ್ಞಾನ ನಮ್ಮಲ್ಲಿ ಮುಂದುವರಿದಿಲ್ಲ. ನಾವು ಧರ್ಮದ ವಿಷಯದಲ್ಲಿ ಕೈಕಟ್ಟಿ ನಿಂತರೆ, ಪಾಶ್ಚಾತ್ತ್ಯರು ಕೆದಕಿ ನೋಡುವ ಪ್ರಯತ್ನ ಮಾಡುತ್ತಾರೆ. ನಾಲ್ಕನೆಯದು ಸಮಾಜ ಸಂಸ್ಕಾರ, ಸಮಾಜ ಸುಧಾರಣೆಗಾಗಿ ಪಾಶ್ಚಾತ್ತ್ಯರು ನಿಷ್ಪಕ್ಷಪಾತವಾಗಿ, ನಿರ್ದಾಕ್ಷೀಣ್ಯವಾಗಿ ವಿಚಾರ ಮಾಡುವಂತೆ ನಮ್ಮಲ್ಲಿ ಸಾಧ್ಯವಿಲ್ಲ.

---

೩. ಡಿ.ವಿ.ಜಿ. : ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೫೮

೪. ಅದೇ ಪುಟ ೬೧

## ಸಾಹಿತ್ಯ ಮತ್ತು ಜನಜೀವನ

1920ರ ಸೆಪ್ಟೆಂಬರ್ 20 ರಂದು ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದಲ್ಲಾದ ದ್ವಿತೀಯ ವರ್ಷಾರಂಭದಲ್ಲಿ ಮಾಡಿದ ಭಾಷಣ ಕರ್ನಾಟಕ ಸಂಘವೇರ್ಪಟ್ಟಿರುವುದುರ ಬಗ್ಗೆ ಸಂತೋಷಗೊಂಡ ಡಿ.ವಿ.ಜಿಯವರು ಅದು ಅವಶ್ಯಬೀಳುವಂತೆ ಮಾಡಿರುವ ಸನ್ನಿವೇಶದ ಬಗೆಗೆ ವ್ಯಾಕುಲವಾಗುತ್ತಾರೆ. ಅವರ ಪ್ರಕಾರ ಉಚಿತ ರೀತಿಯಲ್ಲಿ ಬಾಳಿ ಬೆಳೆಯುವ ಯಾವ ಜನರಿಗೂ ಸ್ವಭಾಷಾಭಿಮಾನವನ್ನು ಕಲಿಸುವ ವಿಶೇಷ ಪ್ರಯತ್ನಗಳು ಬೇಕಾಗುವುದಿಲ್ಲ. ಇಂಗ್ಲೆಂಡಿನಲ್ಲಿ ಕನ್ನಡ ಹರಡಬೇಕಾದರೆ ಒಂದು ಹೊಸ ಸಂಘ ಬೇಕು. ಅದು ಸಹಜ. ಅದರಂತೆ ಕನ್ನಡ ನಾಡಿನಲ್ಲಿ ಆಂಗ್ಲ ಭಾಷಾ ಅಥವಾ ಹಿಂದಿ ಭಾಷಾಭ್ಯಾಸಕ್ಕೆ ಸಂಘಗಳನ್ನು ಸ್ಥಾಪಿಸುವುದು ಉಚಿತ. ಆದರೆ ಕನ್ನಡಿಗರದೇ ನಾಡಿನಲ್ಲಿ ಕನ್ನಡದಲ್ಲಿ ಮಮತೆ, ಶ್ರದ್ಧೆ ಹುಟ್ಟಿಸಲು ಸಂಘಗಳು ಬೇಕಾಗಿರುವುದು ವಿಷಾದದ ಸಂಗತಿ ಎನ್ನುತ್ತಾರೆ ಡಿವಿಜಿ. ಮ್ಯಾಕ್ಸ್‌ಮುಲ್ಲರ್ ಹೇಳಿಕೆಯೊಂದನ್ನು ಉದಾಹರಿಸುತ್ತಾರೆ. ಅವರ ಪ್ರಕಾರ ಸಂಸ್ಕೃತ ಭಾಷೆಯು ಜನಸಾಮಾನ್ಯರ ದಿನಂಪ್ರತಿ ವ್ಯವಹಾರದಲ್ಲಿಲ್ಲದಿದ್ದರೂ ಅದು ಮಾತೃಭಾಷೆಯಾಗಲಾರದು. ಆದರೆ ಕನ್ನಡ ಮಾತನಾಡುವ ಜನರು ಸಂಸ್ಕೃತ ಮಾತನಾಡುವವರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿದ್ದರೂ, ಅದು ಪ್ರಬಲ ಭಾಷೆಯಾಗಲಿಲ್ಲ. ಇದಕ್ಕೆ ಕಾರಣವೆಂದರೆ ಸಂಸ್ಕೃತವೆಂಬ ವೃಕ್ಷದ ಕೊಂಬೆಗಳಲ್ಲಿ ಸಾಹಿತ್ಯರಾಶಿ ಹಸಿರಾಗಿ ತೂಗಾಡುತ್ತಿದೆ. ಆದರೆ ಕನ್ನಡವೆಂಬ ಮರದ ಕೊಂಬೆಗಳು ಬಿಳಲು ಬಿಟ್ಟಿವೆ. ಎಲೆಗಳು ಹೊಂಬಣ್ಣಕ್ಕೆ ತಿರುಗಿವೆ. ಹೊಸ ತಳಿರು ಮಾತ್ರ ಇನ್ನೂ ಕಾಣುತ್ತಿಲ್ಲ ಎಂದು ಡಿ.ವಿ.ಜಿಯವರು ಅಭಿಪ್ರಾಯಪಡುತ್ತಾರೆ.

ಭಾಷೆಗೆ ಸಂಬಂಧಿಸಿದಂತೆ ಕಾಳಿದಾಸನ ಹೇಳಿಕೆಯನ್ನು ಡಿ.ವಿ.ಜಿ. ಈ ರೀತಿ ಹೇಳುತ್ತಾರೆ. ಕಾಳಿದಾಸ ಸೂಚಿಸಿರುವಂತೆ ಭಾವನೆಯೇ ಭಾಷೆಗೆ ಪ್ರಾಣವಾಯು. ಯಾವ ಭಾಷೆಯ ಕಾವ್ಯದಲ್ಲಿ ಮನುಷ್ಯನ ಚಿತ್ರವಿಚಿತ್ರ ಭಾವನಾ ವಿಶೇಷಗಳು ಬಣ್ಣಿಸಿರುತ್ತವೆಯೋ, ಯಾವ ಭಾಷೆಯ ಗ್ರಂಥಗಳಲ್ಲಿ ಲೋಕದ ನೀತಿಗೆ ಮೂಲವಾದ ಜೀವರಹಸ್ಯಗಳು ವಿವರಿಸಲ್ಪಟ್ಟಿವೆಯೋ, ಯಾವ ಭಾಷೆಯ ಸಾಹಿತ್ಯದಲ್ಲಿ ಸರ್ವಸ್ವವೂ ಅಡಗಿರುವವೋ ಆ ಭಾಷೆಯು ಸಾಮಾನ್ಯ ಜನರ ದಿನಗಟ್ಟಲೆಯ ವ್ಯವಹಾರದಲ್ಲಿಲ್ಲದಿದ್ದರೂ ಪ್ರಪಂಚದ ಮನ್ನಣೆಗೆ ಪಾತ್ರವಾಗುವುದು. ಯಾವ ಭಾಷೆಯು ನಮ್ಮ ಕನ್ನಡದಂತೆ ದಿನಂಪ್ರತಿ ವ್ಯವಹಾರದಲ್ಲಿದ್ದರೂ, ಅದನ್ನು ಮೀರಿದ ಕಾರ್ಯಗಳಿಗೆ ಒದಗುವುದಿಲ್ಲವೋ ಯಾವ ಭಾಷೆಯು ಶರೀರ ವ್ಯಾಪಾರಗಳಿಗೆ ಮಾತ್ರವೇ ಉಪಯುಕ್ತವೋ, ಅದು ಕೋಟ್ಯಾಂತರ ಜನರಲ್ಲಿ ಬಳಕೆಯಲ್ಲಿದ್ದರೂ ಲೋಕದ ಗಣನೆಗೆ ಬಾರದು.

ಭಾಷೆಯ ಸ್ಥಿತಿಯು ಎಲ್ಲೆಲ್ಲಿಯೂ ಜನರ ಸ್ಥಿತಿಗೆ ಅನುಗುಣವಾಗಿರುವುದು ಅವರ ರಾಜಕೀಯ ಸ್ಥಿತಿಯು ಹೇಗೆ ಅವರ ಪ್ರಜಾಧರ್ಮಾಚರಣೆಗೆ ತಕ್ಕಂತೆ ಇರುವುದೋ, ಅವರ ಮತ ನೀತಿಗಳ ಸ್ಥಿತಿಯು ಹೇಗೆ ಅವರ ಭಗವದ್ಭಕ್ತಿ ಆಧ್ಯಾತ್ಮಿಕತೆಗೆ ತಕ್ಕಂತೆ ಇರುವುದೋ ಹಾಗೆಯೇ ಅವರ ಭಾಷೆಯ ಸ್ಥಿತಿಯು ಅವರ ಚಿತ್ತವೃತ್ತಿ

ಜೀವನ ವಿಧಾನಗಳಿಗೆ ತಕ್ಕಂತೆ ಇರುವುದು. ಎಲ್ಲಾ ಜನರ ಜೀವನವು ಬಹು ಸಂಕಲ್ಪಗಳಿಂದ ಕೂಡಿದುದಾಗಿದೆ. ಬಹು ಸಮಾರಂಭಗಳಲ್ಲಿ ಪ್ರವೃತ್ತವಾಗಿ, ಬಹುಮುಖವಾಗಿ ಹರಿಯುತ್ತಿರುವುದೋ, ಅಲ್ಲಿ ಗ್ರಂಥ ರಚನೆಯ ಬಹುಗುಣ ವಿಶಿಷ್ಟವಾಗಿ, ಬಹುಭಾವಗರ್ಭಿತವಾಗಿ, ಬಹು ಪ್ರಕಾರವಾಗಿ ನಡೆಯುವುದು. ಎಲ್ಲಿ ಜನಜೀವನವು ಧೀರೋದ್ದಾರಗುಣವಿಹೀನವಾಗಿ ಕಾಯಕ ವ್ಯಾಪಾರಗಳಲ್ಲಿ ಮಾತ್ರ ನಿಂತಿರುವುದೋ ಅಲ್ಲಿ ಮಹಾಕಾವ್ಯವು ಹುಟ್ಟುವುದಿಲ್ಲ. ಸದ್ಗ್ರಂಥ ಮಹಿಮೆಯಿಂದ ಜನಜೀವನವು ಉತ್ತಮಗೊಳ್ಳುವಂತೆ, ಜನಜೀವನದ ಮಹಿಮೆಯಿಂದ ಸದ್ಗ್ರಂಥಗಳು ಹುಟ್ಟುವುವು. ಆದುದರಿಂದ ಕನ್ನಡಿಗರ ಭಾಷಾಭಿಮಾನವು ನಿಜವಾದರೆ, ಅವರ ಜೀವನಕ್ರಮದಲ್ಲಿ ಸದ್ವಿಚಾರಕಾಸಕ್ತಿಯೂ, ಮಹಾಕಾರ್ಯೋತ್ಸಾಹವೂ ಹೆಚ್ಚಿ ಅವರಲ್ಲಿ ರಾಜಕೀಯವೂ, ಆರ್ಥಿಕವೂ ಆದ ವಿವಿಧ ಸಮಾರಂಭಗಳು ಬೆಳೆಯಬೇಕು. ನಾವು ಚೆನ್ನಾಗಿ ಬದುಕಿದ್ದರೆ ನಮ್ಮ ಭಾಷೆಯು ಅಷ್ಟೇ ಚೆನ್ನಾಗಿ ಬೆಳೆದು, ಉತ್ತಮ ಸಾಹಿತ್ಯಾರಾಶಿ ಬೆಳೆಯುವುದು ಎಂದು ಡಿವಿಜಿಯವರು ತಮ್ಮ ಭಾಷಣದ ಮೂಲಕ ಕನ್ನಡಿಗರಿಗೆ ಕರೆ ನೀಡಿರುತ್ತಾರೆ.

## ಭಾಷೆಯ ಸ್ವರೂಪ ಮತ್ತು ಸ್ವಭಾವ

1923ರಲ್ಲಿ 'ಪ್ರಬುದ್ಧ ಕರ್ಣಾಟಕ' ಪತ್ರಿಕೆಯಲ್ಲಿ ಪ್ರಕಟವಾದ ಲೇಖನವಾಗಿದೆ. ಈ ಲೇಖನದಲ್ಲಿ ಡಿವಿಜಿಯವರು ಭಾಷೆಯ ಉಗಮದ ಬಗೆಗೆ ಬ್ರಾಹ್ಮಣಕಗಳಲ್ಲಿ ಕೆಲವಾರು ಉಲ್ಲೇಖಗಳನ್ನು ಕೊಡುತ್ತಾರೆ. ತಾವು ಕೊಟ್ಟ ಉಲ್ಲೇಖಗಳಿಂದ ಭಾಷೆಯ ಸ್ವಭಾವಗಳನ್ನು ಕುರಿತು ಈ ಕೆಳಗಿನಂತೆ ಗುರುತಿಸುತ್ತಾರೆ.

1. ಭಾಷೆಯೆಂಬುದು ಜಗತ್ಸೃಷ್ಠಿಯ ಒಂದು ಶಕ್ತಿವಿಶೇಷದ ಸ್ವರೂಪ.
2. ಅದು ಸ್ವಯಂ ವ್ಯಕ್ತವಾದುದು
3. ಅದು ನಿರ್ಬಂಧಕ್ಕೊಳಪಡದೆ ಸ್ವತಂತ್ರವಾಗಿ ಬೆಳೆಯತಕ್ಕದ್ದು.
4. ಅದರ ರೂಪಗಳೂ, ರೀತಿಗಳೂ, ಕಾರ್ಯಗಳೂ ನಾನಾ ಬಗೆಯವು.

ಡಿವಿಜಿ ಯವರು ಈ ಪ್ರಬಂಧದಲ್ಲಿ ಹೇಳುವ ಪ್ರಕಾರ ''ಭಾಷೆ'' ಎಂದರೆ ಒಂದು ಗುಂಪಿನ ಮನುಷ್ಯರು ಆಡುವ ಮಾತುಗಳು ಅಥವಾ ಅಕ್ಷರ ಶಬ್ದಗಳ ಸಮೂಹದ ಹೆಸರು''[೫]. ಒಂದು ದೇಶದ ಅಥವಾ ಒಂದು ಗುಂಪಿನ ಜನರು ತಮ್ಮ ಇಂದ್ರಿಯಗಳಿಗೆ ತಿಳಿದು ಬಂದಿರುವ ನಾನಾ ಪ್ರಾಣಿಗಳಿಗೂ ನಾನಾ ಪದಾರ್ಥಗಳಿಗೂ, ಅವುಗಳ ನಾನಾ ವರ್ತನೆಗಳಿಗೂ, ಕಾರ್ಯಗಳಿಗೂ, ಅನುಭವಗಳಿಗೂ ಒಂದೊಂದಕ್ಕೆ ಒಂದೊಂದು ಸಂಕೇತ ಅಥವಾ ಹೆಸರನ್ನು ಗೊತ್ತುಮಾಡಿಕೊಂಡಿರುವ ಸಂಕೇತಗಳ ಅಥವಾ ಮಾತುಗಳ ಸಮೂಹವೇ ಅವರ ಭಾಷೆಯಾಗುತ್ತದೆ.

---

೫. ಡಿ.ವಿ.ಜಿ.: ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೧೩೧

ಭಾಷೆಗೆ ಮರ್ಯಾದೆ ಎಂಬುದೊಂದು ಇದೆ. ಅದು ಬಹುಕಾಲದಿಂದ ಮಾತುಗಳಿಗೆ ನಡೆದು ಬಂದಿರುವ ಸಂಸ್ಕಾರದ ಫಲಿತಾಂಶ. ಅದು ಅನೇಕ ತಲೆಮಾರುಗಳ ಗ್ರಂಥಲೇಖಕರು ಅಂಗೀಕರಿಸಿ, ಅನುಸರಿಸುತ್ತಿರುವ ಪದ್ಧತಿಯಾಗಿದೆ. ಅದರ ಬಾಹ್ಯವಿಧಿಗಳನ್ನೇ ವೈಯಾಕರಣರೂ, ಲಾಕ್ಷಣಿಕರು ತಿಳಿಸಿಕೊಡಲು ಪ್ರಯತ್ನಿಸುತ್ತಿದ್ದು ಇದನ್ನು ನಾವು ಅನುಸರಿಸದಿದ್ದರೆ ನಮ್ಮ ಮಾತುಗಳಿಂದ ನಾವು ಯಾವ ಕೆಲಸ ಮಾಡಿಸಬೇಕೆಂಬ ಉದ್ದೇಶವಿಟ್ಟುಕೊಂಡಿರುವವೋ ಆ ಕೆಲಸವನ್ನು ಸರಿಯಾಗಿ ಮಾಡಲು ಆಗದು. ಕನ್ನಡದಲ್ಲಿ ಹೊಸ ಮಾತುಗಳನ್ನೂ ಹೊಸ ಪ್ರಯೋಗಗಳನ್ನೂ ಸೇರಿಸಬೇಕೆನ್ನುವವರು ಈ ನಿಯಮವನ್ನು ನೆನಪಿನಲ್ಲಿಟ್ಟುಕೊಂಡು ಮುನ್ನಡೆಯಬೇಕು ಇಲ್ಲದಿದ್ದರೆ ಭಾಷಾ ಪ್ರಯೋಗದಲ್ಲಿ ಅಭಾಸವಾದೀತು ಎಂಬ ಎಚ್ಚರಿಕೆಯನ್ನು ಕೊಡುತ್ತಾರೆ.

ಒಬ್ಬೊಬ್ಬ ವ್ಯಕ್ತಿಗೆ ಒಂದೊಂದು ವಿಧದ ಶಕ್ತಿ, ಸ್ವಭಾವಗಳು ಇರುತ್ತವೆ. ಒಂದೊಂದು ದೇಶ ಅಥವಾ ಜನಪದಕ್ಕೆ ಸಾಮುದಾಯಿಕವಾದ ಒಂದೊಂದು ಬಗೆಯ ಬುದ್ಧಿಶಕ್ತಿ, ಮನಃಪ್ರವೃತ್ತಿಗಳು ಬರುತ್ತವೆ. ಅದೇ ರೀತಿ ನಾನಾ ಭಾಷೆಗಳಿಗೂ ಬೇರೆ-ಬೇರೆಯಾದ ಗುಣ, ಸ್ವಭಾವ, ಪ್ರವೃತ್ತಿಗಳು ಇರುತ್ತವೆ. ಒಂದೊಂದು ಭಾಷೆಗೆ ಒಂದೊಂದು ಬಗೆಯ ಗುಣವಿರದಿದ್ದರೆ, ಒಂದು ಭಾಷೆಯ ಕಾವ್ಯವನ್ನು ಮತ್ತೊಂದು ಪರಿವರ್ತಿಸಬಹುದಿತ್ತು. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ತರ್ಜುಮೆಗೊಂಡ ಗ್ರಂಥವನ್ನು ನೋಡಿದರೆ, ಅದರಲ್ಲಿ ಮೂಲಗ್ರಂಥದ ಸ್ವಾರಸ್ಯವೆಲ್ಲವೂ ಇರಲು ಸಾಧ್ಯವಿಲ್ಲ. ಹೀಗಾಗಿ ಭಾಷಾಂತರ ಮಾಡುವುದು 'ಪರಿಕಾಯ ಪ್ರವೇಶ' ಮಾಡುವಷ್ಟು ಕಷ್ಟದ ಕೆಲಸವಾಗಿದೆ.

ಡಿವಿಜಿ ಯವರ ಪ್ರಕಾರ ಮಾತಿನ ಗುಟ್ಟನ್ನೆಲ್ಲ ಕಂಡುಕೊಂಡು ಅದರಿಂದ ಹೊಸ ಹೊಸ ಕೆಲಸಗಳನ್ನು ಮಾಡಿಸುವುದೇ ಕವಿಯ ಚಮತ್ಕಾರ ಎನ್ನುತ್ತಾರೆ. ಕವಿ ಎಲ್ಲರಿಗೂ ಸಿಗುವ ಪದಗಳಿಂದ ಹೊಸ ಭಾವಗಳನ್ನು ಮುಂದೆ ತರುತ್ತಾನೆ. ಈ ರೀತಿಯ ಪ್ರಯೋಗಗಳಿಂದ ಭಾಷೆಯು ಅಬಿವೃದ್ಧಿಯಾಗುತ್ತದೆ. ಭಾಷೆಯ ಅಭಿವೃದ್ಧಿಯೆಂಬ ಸಂಗತಿಯು ಒಂದು ಮುಕ್ಕಾಲು ಮಣೆಯ ಮೇಲೆ ಕೂತಿದೆ ಎಂಬುದು ಡಿವಿಜಿಯವರ ಅಭಿಪ್ರಾಯ. ಅಂದರೆ

"1. ಭಾಷೆಯ ಸಹಜಗುಣ ಮತ್ತು ಪೂರ್ವಸಂಪ್ರದಾಯ

2. ಆದರೆ ನೂತನ ಗ್ರಂಥಗಳ ವಸ್ತುವಿಷಯಗಳ ಸ್ವಭಾವ

3. ನೂತನ ಗ್ರಂಥ ಲೇಖರ ಶಕ್ತಿಯುಕ್ತಿಗಳು "[೬] ಈ ಮೂರು ಆ ಮಣೆಯ ಕಾಲುಗಳೆನ್ನುತ್ತಾರೆ.

ಮುಂದೆ ಡಿವಿಜಿಯವರ ಮಾತುಗಳು ಗಮನಾರ್ಹವಾದವುಗಳು. ಕನ್ನಡದಲ್ಲಿ ಪದ್ಯಗಳನ್ನು ರಚಿಸುವವರು

೬. ಡಿ.ವಿ.ಜಿ. : ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ ೧೪೨

ಹಳೆಗನ್ನಡದ ರೂಪಗಳನ್ನು ಸಂಪೂರ್ಣವಾಗಿ ಬಿಟ್ಟು ಹೊಸಗನ್ನಡದಲ್ಲೇ ಬರೆಯಬೇಕೆಂದು ಕೆಲವರು ಹೇಳುವರು. ಜನ ತಿಳಿಯದ ಭಾಷೆಯನ್ನು ಬಿಡಬೇಕೆಂಬುದುನ್ನು ಒಪ್ಪುವ ಡಿವಿಜಿ ಸಾಮಾನ್ಯ ಪರಿಚಯವಿರುವ ಹಳಗನ್ನಡದ ಪದರೂಪಗಳಿಗೆ ಬಹಿಷ್ಕಾರ ಹಾಕುವುದು ಸರಿಯಲ್ಲ ಎನ್ನುತ್ತಾರೆ. ಹಳಗನ್ನಡ ರೂಪಗಳಿಗೆ ಇರುವ ಆಕರ್ಷಕ ಶಕ್ತಿ ಹೊಸಗನ್ನಡದ ರೂಪಗಳಿಗಿಲ್ಲ. ಹಳಗನ್ನಡ ಕಾವ್ಯಗಳು ಕಿವಿಗಿಂಪಾಗುವಂತೆ, ಹೊಸಗನ್ನಡ ರೂಪಗಳಿಂದ ಆಗದು ಎಂದು ಹೇಳುತ್ತಾ ಹಳಗನ್ನಡಕ್ಕೆ ಪ್ರಾಶಸ್ತ್ಯ ನೀಡುತ್ತಾರೆ.

## ಭಾಷೆಯ ವ್ಯವಹಾರ ರೂಪಗಳು

ಈ ಲೇಖನವೂ ಕೂಡ 'ಪ್ರಬುಧ ಕರ್ಣಾಟಕ' ದಲ್ಲಿ ಪ್ರಕಟವಾಗಿತ್ತು. ಮಾತಿನ ಉಪಯೋಗವು ಬಾಯಿಯದು ಮತ್ತು ಬರಹದ್ದು ಎಂಬ ಎರಡು ಬಗೆಯಲ್ಲಿದೆ. ಇದರಲ್ಲಿ ಬಾಯಿ ಮಾತು ಲಕ್ಷಣ ಸಮನ್ವಯಕ್ಕೆ ಸಿಕ್ಕುವುದಿಲ್ಲ. ಇದರಿಂದ ಅದು ಭಾಷಾಭಿಮಾನಿಗಳ ಉಪೇಕ್ಷೆಗೆ ಗುರಿಯಾಗಿದೆ ಎಂಬ ಅರ್ಥವಲ್ಲ. ಏಕೆಂದರೆ ಜನಜೀವನದ ಮತ್ತು ಭಾಷೆಯ ಜೀವನವನ್ನು, ಚಲನವಲನಗಳು ಬಾಯಿಮಾತಿನಿಂದಲೇ ಗೊತ್ತಾಗುವುದು. ಉಪನ್ಯಾಸ, ಪ್ರಬಂಧಗಳಲ್ಲ ಬರಹ ಭಾಷೆಗೆ ಒಂದು ತರನಾದ ಮಾನಮರ್ಯಾದೆಗಳನ್ನು ತೋರಲೇ ಬೇಕೆಂಬ ಕಟ್ಟುಪಾಡು ಇದೆ. ಬಾಯಿ ಮಾತಿಗಾದರೂ ಆ ಯಾವ ಕಟ್ಟುಪಾಡು ಅಷ್ಟು ಖಂಡಿತವಾಗಿಲ್ಲ. ಆದಕಾರಣ ಭಾಷೆಗೆ ಸಹಜವಾದ ಕುಂದುಕೊರತೆಗಳೂ ಅಂದಚಂದಗಳು ಗುಟ್ಟುಗೌಪ್ಯಗಳೂ ಬಾಯಮಾತಿನಲ್ಲಿ ಹೊರಬೀಳುವಂತೆ ಬರಹದ ಮಾತಿನಲ್ಲಿ ಹೊರಬೀಳುವುದಿಲ್ಲ. ಅಲ್ಲದೆ ಬರಹದ ಮಾತಿನ ವಿಷಯವನ್ನು ಬಾಯಿ ಮಾತು ಬಹುಮಟ್ಟಿಗೆ ನಿರ್ಧರಿಸುತ್ತದೆ. ಏಕೆಂದರೆ ಯಾವ ಕವಿಯೂ ತನ್ನ ಕಾಲದ ಜನರ ಮಾತು ಕಥೆಗಳನ್ನು ಮೀರಿ ಬರೆಯಲು ಸಾಧ್ಯವಿಲ್ಲ. ಸ್ವಲ್ಪ ಮಟ್ಟಿಗಾದರೂ ಕವಿಯು ತನ್ನ ಸುತ್ತ ಮುತ್ತಲಿನವರ ನಡೆನುಡಿಗಳ ಅಂಶಗಳನ್ನು ತೆಗೆದುಕೊಳ್ಳುವನು. ಸಾಮಾನ್ಯ ಜನರ ಬಾಯಿ ಮಾತಿನಲ್ಲಿ ಎಷ್ಟು ಸುಲಕ್ಷಣಗಳಿರುವವೋ ಅಷ್ಟು ಅವರ ಭಾಷೆಗೆ, ಆ ಭಾಷೆಯ ಸಾಹಿತ್ಯಕ್ಕೆ, ಆ ಮೂಲಕ ಜನರ ಜೀವನಕ್ಕೆ ಒಳ್ಳೆಯದಾಗುತ್ತದೆ.

ಬರಹದ ಮಾತುಗಳೆಂದರೆ ಗ್ರಂಥಗಳು ಯಾವ ವಾಕ್ಯಸಮೂಹವು ಅದನ್ನು ಹೇಳಿದ ಅಥವಾ ಬರೆದ ಒಬ್ಬಿಬ್ಬರಿಗೆ ಪ್ರಯೋಜನಕ್ಕೆ ಬಾರದೆ, ಇತರರಿಗೂ ಕೊಂಚಮಟ್ಟಿಗಾದರೂ ಪ್ರಯೋಜನವಾಗುವುದೋ, ಅವರು ಶ್ರದ್ಧೆಯಿಂದ ಓದಿ ವಿಚಾರ ಮಾಡಲು ಅರ್ಹವೆಂದು ಪರಿಗಣಿಸುವರೋ ಅದನ್ನು ನಾವು ಗ್ರಂಥವೆಂದು ಕರೆಯಬಹುದು ಎಂದು ಡಿವಿಜಿ ಅಭಿಪ್ರಾಯ ಪಡುತ್ತಾರೆ. ''ಗ್ರಂಥಗಳಲ್ಲಿ ವರ್ಣನೆಗಾಗಲಿ, ವಿವರಣೆಗಾಗಲಿ, ಪ್ರಾಸ್ತಾವಿಕವಾಗಿಯಾಗಲಿ, ದೃಷ್ಟಾಂತಕ್ಕಾಗಿಯಾಗಲಿ, ಮುಖ್ಯ ವಿಷಯದ ಉಪಾಂಗವಾಗಿಯಾಗಲಿ, ಉಪಕರಣವಾಗಿಯಾಗಲಿ ಎಲ್ಲಾ ವಿದ್ಯೆ, ಎಲ್ಲಾ ಕಲೆ, ಎಲ್ಲಾ ಶಾಸ್ತ್ರಗಳ ಅಂಶಗಳೂ ಸೇರಿರುವುದಾದರಿಂದ

ಅವುಗಳೆಲ್ಲವುಗಳ 'ಸಹಿತತ್ವ'ವಿರುವುದರಿಂದ ಗ್ರಂಥರಾಶಿಗೆ ಸಾಹಿತ್ಯವೆಂಬ ಹೆಸರು ರೂಢಿಯಾಗಿದೆ.[೭] ಈ ಸಾಹಿತ್ಯವನ್ನು ಕಾವ್ಯವೆಂದು, ಶಾಸ್ತ್ರವೆಂದು ಎರಡು ಜಾತಿಗಳಾಗಿ ವಿಂಗಡಿಸಿದೆ. ಯಾವ ಗ್ರಂಥಗಳು ಓದುಗರಿಗೆ ಚಿತ್ರಸಮುನ್ನತಿಯನ್ನು ಉಂಟು ಮಾಡಿ ಧರ್ಮ, ಅಧರ್ಮಗಳ ಜ್ಞಾನವನ್ನು ನೀಡಿ, ಮಾರ್ಗದರ್ಶನ ನೀಡುವವೋ ಅವು ಕಾವ್ಯವರ್ಗಕ್ಕೆ ಸೇರುತ್ತವೆ. ಯಾವ ಗ್ರಂಥಗಳು ಓದುಗರಿಗೆ ವಸ್ತುಜ್ಞಾನವನ್ನು ಹೆಚ್ಚಿಸಿ, ಅವರ ಆಚಾರ ವ್ಯವಹಾರಗಳಿಗೆ ಉಪಯುಕ್ತ ತಿಳುವಳಿಕೆ ನೀಡುವುದೋ ಅವು ಶಾಸ್ತ್ರ ವರ್ಗಕ್ಕೆ ಸೇರುತ್ತವೆ. ಇಲ್ಲಿ ಕಾವ್ಯದ ಕಾರ್ಯಕ್ಷೇತ್ರ ಮನಸ್ಸಾದರೆ, ಶಾಸ್ತ್ರದ ಕಾರ್ಯಕ್ಷೇತ್ರ ಬುದ್ಧಿ.

ಕಾವ್ಯವನ್ನು ಮತ್ತೆ ನಾವು ಗದ್ಯಕಾವ್ಯ ಮತ್ತು ಪದ್ಯಕಾವ್ಯ ಎಂದು ವಿಂಗಡಿಸುತ್ತೇವೆ. ರಸೋತ್ಪಾದನೆಗೆ ಅವಕಾಶವಿರುವುದಕ್ಕಿಂತ ವಿಷಯ ನಿರೂಪಣೆಗೆ ಹೆಚ್ಚಿನ ಅವಕಾಶವಿರುವುದು ಗದ್ಯದಲ್ಲಿ, ಪದ್ಯದಲ್ಲಿ ವಿವರಣೆ ಭಾಗಕ್ಕಿಂತ ಪಾತ್ರಗಳ ಮನೋವಿಕಾರಗಳ ವಿಷಯವೇ ಮುಖ್ಯವಾಗಿರುತ್ತದೆ. ಪದ್ಯದಲ್ಲಾಗಲಿ, ಗದ್ಯದಲ್ಲಾಗಲಿ ಕವಿಯ ಪ್ರತಿಭೆ ವಿಶೇಷ ಕೆಲಸ ಮಾಡುತ್ತದೆ. ಪ್ರತಿಭೆಯೆಂದರೆ ನಕ್ಷತ್ರದ ಥಳಥಳದಂತೆ, ಕಡಲ ತೆರೆಗಳಲ್ಲಿ ಕಾಣುವ ಸೂರ್ಯ ಪ್ರತಿಭೆಯ ಹೊಳ ಹೊಳಪಿನಂತೆ ಕ್ಷಣ ಕ್ಷಣವೂ ಹೊಸ ಹೊಸದಾಗುತ್ತಿರುವ ಬುದ್ಧಿಯ ಪ್ರಕಾಶ ಎಂಬುದು ಡಿವಿಜಿಯವರು ಪ್ರತಿಭೆಯನ್ನು ಕುರಿತು ಹೇಳಿದ ಹೇಳಿಕೆಯಾಗಿದೆ. ಹೀಗೆ ಕವಿ ಪ್ರತಿಭೆಯಿಂದ ಮಾಡುವ ಚಮತ್ಕಾರಗಳು ಕಾವ್ಯದಲ್ಲಿ ರಸಪರಿಪುಷ್ಟಿ ಮಾಡತಕ್ಕವುಗಳಾಗಿರಬೇಕೆ ಹೊರತು ರಸಕ್ಕೆ ಭಂಗ ತರಬಾರದು. ಕವಿಯ ಸ್ವಭಾವದಂತೆ ಅವನ ಶೈಲಿ. ಲೇಖಕನ ವಿಷಯ, ಸ್ವಭಾವ ಇವೆರಡೂ ಅವನ ಗ್ರಂಥದ ರೀತಿಯನ್ನೂ, ಶೈಲಿಯನ್ನೂ ಗೊತ್ತು ಮಾಡುತ್ತವೆ.

## ಸೌಂದರ್ಯ ಸಂಹಿತೆ

ಸಂಹಿತೆ ಎಂದರೆ 'ಒಂದು ಗಂಭೀರ ವಿಚಾರಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳ ಅಥವಾ ಅನೇಕ ವಸ್ತುಗಳ ಸಮುದಾಯ. ಈ ನಾನಾ ವಿಷಯಗಳು ತಮ್ಮ ಅನ್ಯೋನ್ಯ ಸಂಬಂಧಗಳನ್ನು ವ್ಯಕ್ತಪಡಿಸಿ ಒಂದುಗೂಡಿದ್ದರೆ ಅದು ಒಟ್ಟು ಸಂಹಿತೆ''[೮] ಎಂದು ಹೇಳುತ್ತಾರೆ. ಕಾವ್ಯವೆಂಬುದು ಒಬ್ಬ ಪ್ರತಿಭಾಶಾಲಿಯು ಜಗತ್ತಿನೊಡನೆ ನಡೆಸುವ ಸಲ್ಲಾಪ. ಅದರ ಕೂಗಿಗೆ ಅವನ ಮರುಕೂಗು, ಅದರ ಸಂತಾಪಕ್ಕೆ ಅವನ ಅನುತಾಪ, ಅದರ ಸಂತೋಷಕ್ಕೆ ಅವನ ಪರಿತೋಷ. ಅವನು ತಾನು ಕಾಣುವ ಸಂಗತಿಗಳನ್ನು ಚಿತ್ತರಿಸಿ ಲೋಕದ ಮುಂದೆ ಇರಿಸುತ್ತಾನೆ. ಹೇಗಾದರೂ ಕವಿಹೃದಯದಿಂದ ಲೋಕವು ಹೊರಡಿಸಿದ ಸಂದೇಶವೇ ಕಾವ್ಯವಾಗಿದೆ. ಕಾವ್ಯದ ಸೌಂದರ್ಯ ಸಂದೇಶದವಾಗಿದೆ. ಕಾವ್ಯಜ್ಞರ ದೃಷ್ಟಿಯಲ್ಲಿ ಸೌಂದರ್ಯವೆಂದರೆ ಮಾನವ ಹೃದಯವನ್ನು ಕದಲಿಸುವ ಸುಖಶಕ್ತಿ. ಯಾವುದು ನಮ್ಮ ಮನಸ್ಸನು ಹಿಡಿದು, ತಡೆದು, ಕೆಣಕಿ ನಮ್ಮ

೭. ಡಿ.ವಿ.ಜಿ.: ಜೀವನ ಸೌಂದರ್ಯ ಮತ್ತು ಸಾಹಿತ್ಯ, ಕಾವ್ಯಾಲಯ ಪ್ರಕಾಶನ, ೧೯೯೭, ಪುಟ೧೫೦
೮. ಅದೇ: ಪುಟ೧೭೨

ಜೀವನದ ಮೇಲೆ ಪರಿಣಾಮವನ್ನುಂಟು ಮಾಡಬಲ್ಲದೋ, ಅದೆಲ್ಲವೂ ಸೌಂದರ್ಯ ಸಾಮಗ್ರಿಯಾಗಿದೆ. ಈ ಸೌಂದರ್ಯ ಸನ್ನಿವೇಶ ಕಲಾ ಚಮತ್ಕಾರ, ಮನುಷ್ಯ ಸ್ವಭಾವ, ಮನುಷ್ಯ ಬಾಂಧವ್ಯ ಅಥವಾ ಬಾವದ್ದಾಗಿರಬಹುದು. ಕೇವಲ ಕಲಾರಸಗಳಲ್ಲಿನ ಶೃಂಗಾರ, ವೀರ, ಅದ್ಭುತಗಳು ಮಾತ್ರವೇ ಸೌಂದರ್ಯವಲ್ಲ. ಶೋಕ, ಜಿಗುಪ್ಸೆಗಳೂ ಸಹ ಸೌಂದರ್ಯದ ಅವತಾರಗಳು ಏಕೆಂದರೆ ಇವು ಕೂಡ ಓದುಗರ ಗಮನವನ್ನು ಹಿಡಿದಿರಿಸಿಕೊಳ್ಳಬಲ್ಲವು.

ಕವಿಗಳ ವಿಧಗಳು ಅನೇಕವಿವೆ. ಎಷ್ಟೋ ಮಂದಿ ಕವಿಗಳು ಯಾವ ವಿಧಕ್ಕೂ ಸೇರುವುದಿಲ್ಲ. ಎಷ್ಟೋ ಕಾವ್ಯಗಳಲ್ಲಿ ಕೆಲಕೆಲವು ಭಾಗಗಳು ಕೆಲಕೆಲವು ಗುಂಪುಗಳಿಗೆ ಸೇರುತ್ತವೆ. ಹೀಗೆ ಎಷ್ಟು ಜಾಗರೂಕತೆಯಿಂದ ವಿಂಗಡಿಸಿದರೂ ಕವಿಗಳನ್ನು ವಿಂಗಡಿಸುವ ಕೆಲಸ ಪೂರ್ತಿಯಗಿಯೂ, ತೃಪ್ತಿಕರವಾಗಿಯೂ ನೆರವೇರುವುದಿಲ್ಲ. ಕಾವ್ಯ ವಿಷಯದ ದೃಷ್ಠಿಯಿಂದ, ನೋಡಿದರೆ ಕವಿಗಳಲ್ಲಿ ಸ್ವಾನುಭೂತಿ ಪ್ರೇರಿತ ಮತ್ತು ಲೋಕಸಹಾನುಭೂತಿ ಪ್ರೇರಿತರೆಂದು ಎರಡು ಜಾತಿಗಳಿವೆ.

ಬಾಹ್ಯ ಪ್ರಪಂಚವನ್ನು ಗಣನೆಗೆ ತೆಗೆದುಕೊಳ್ಳದೆ, ತಮ್ಮ ಅಂತರಂಗದ ಭಾವಗಳನ್ನು ಮಾತ್ರ ಹೊರಪಡಿಸುವವರು ಸ್ವಾನುಭೂತಿ ಪ್ರೇರಿತರು. ಇವರು ಆತ್ಮ ಸಂತುಷ್ಠಿಗಾಗಿ ತಮ್ಮ ದೆಯ ಹೊರೆಯನ್ನಿಸಿಕೊಳ್ಳುವುದಕ್ಕಾಗಿ ಹಾಡಿಕೊಳ್ಳುವವರು, ಈ ಕವಿಗಳ ಲಕ್ಷ್ಯವು ಮುಖ್ಯವಾಗಿ ಸ್ವಂತ ಆತ್ಮನಿಷ್ಠವಾಗಿರುವುದು. ಅವರ ಕಾವ್ಯಗಳಲ್ಲಿ ಕೇಳಿಬರುವುದು. ಒಬ್ಬನ ಹೃದಯ ಧ್ವನಿ. ಆದರೆ ಲೋಕಸಹಾನುಭೂತಿ ಪ್ರೇರಿತರು ತಮ್ಮ ಆಂತರಿಕಾನುಭವಗಳೇನೆಂಬುದರ ಸೆಲೆಯನ್ನು ಅಷ್ಟಾಗಿ ತೋರದೆ, ಸಕಲ ಮಾನವರ ಅನುಭವಕ್ಕೂ ದೊರೆಯಬಹುದಾದ ಜೀವಿತ ಚಿತ್ರಗಳನ್ನು ಚಿತ್ರಿಸುವರು. ಪುರಾಣ ಕಾವ್ಯಗಳು, ಐತಿಹಾಸಿಕ ನಾಟಕಗಳು ಈ ಜಾತಿಯವು. ಈ ಎರಡು ಜಾತಿಗಳಲ್ಲಿಯೂ ಏಕತ್ರಿಕರು ಮತ್ತು ಸಾರ್ವತ್ರಿಕರು ಎಂಬ ಪಂಗಡಗಳೆರಡೂ ಇವೆ.

ಗುಣ, ರೀತಿಗಳ ದೃಷ್ಟಿಯಿಂದಲೂ ಕವಿಗಳಲ್ಲೆರಡು ಜಾತಿಗಳಿವೆ. ಒಂದು ಆವೇಗ ಪ್ರಧಾನವಾದುದು, ಇನ್ನೊಂದು ಸಮಾಧಾನ ಪ್ರಧಾನವಾದುದು. ಒಂದು ಜಾತಿಯವು ಯಾವುದು ನಮ್ಮ ಸ್ವಾನುಭಾವದಲ್ಲಿಯೇ ಇರುತ್ತದೆಯೋ ಅದಕ್ಕೆ ಪೋಷಣೆಕೊಡುವುದು. ಇನ್ನೊಂದು ಜಾತಿಯ ಕಾವ್ಯಗಳು ತಮ್ಮ ಜೀವನದ ಅನೇಕಾಂಶಗಳ ಸಮ್ಮೇಳನವನ್ನು ತೋರಿ, ಕೆರಳಿರುವ ಮನಸ್ಸಿಗೆ ವಿವೇಚನೆಯನ್ನೂ, ಸ್ಥೈರಣೆಯನ್ನೂ ತರಲು ಯತ್ನಿಸುತ್ತವೆ.

ಸೌಂದರ್ಯವು ಬೇರೊಬ್ಬ ಮನುಷ್ಯನಿಗೆ ಒಂದೊಂದು ತೆರನಾಗಿರುತ್ತದೆ. ಅವನ ಪರಿಸ್ಥಿತಿಗೆ ತಕ್ಕಂತೆ ಅವನವನ ಸೌಂದರ್ಯಾನುಭವವೂ, ಸೌಖ್ಯವೂ ಬೇರೆ ಬೇರೆಯಾಗಿರುತ್ತದೆ. ಸೌಂದರ್ಯದಲ್ಲಿ ಅನೇಕ

ವಿಧಗಳು, ಅನೇಕ ಅಂತಸ್ತುಗಳು ಇವೆ. ಸೌಂದರ್ಯವು ಎಷ್ಟೆಷ್ಟು ದೊಡ್ಡದೋ, ಅದರಿಂದಾಗುವ ಸಂಸ್ಕಾರವೂ ಅಷ್ಟು ದೊಡ್ಡದಾಗಿರುತ್ತದೆ. ಸೌಂದರ್ಯದ ಬೀಜವು ಒಂದು ಬಗೆಯ ಸತ್ಯವೆಂದು ಹೇಳಬಹುದು. ವೇದಾಂತಿಗಳು ಸತ್ಯದಲ್ಲಿ ಪಾರಮಾರ್ಥಿಕ, ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಎಂದು ಮೂರು ರೀತಿಯಲ್ಲಿ ಹೇಳುತ್ತಾರೆ. ಇದರಲ್ಲಿ ಪ್ರಾತಿಭಾಸಿಕ ಕನಸಿನಲ್ಲಿ ನಮಗೆ ಆಗುವ ಅನುಭವಗಳಿಗೆ ಸಂಬಂಧಿಸಿದೆ. ಕಾವ್ಯ ಕಲೆಗಳ ಸತ್ಯವು ಈ ಪ್ರಾತಿಭಾಸಿಕ ಸತ್ಯದ ಪ್ರಭೇದವೇ ಆಗಿದೆ ಎಂದು ಡಿವಿಜಿಯವರು ಹೇಳುತ್ತಾ ತಮ್ಮ ಲೇಖನವನ್ನು ಮುಗಿಸುತ್ತಾರೆ.

## ನಾಡೋಜ ಪಂಪ

### ಚಾಲುಕ್ಯ ವಂಶವೂ ಅರಿಕೇಸರಿಯ ಕುಲಶಾಕೆಯೂ

ಕಾಳಿದಾಸನಿಂದ ನಮ್ಮ ಭಾರತವರ್ಷ ಉದ್ಬುದ್ಧವಾಯಿತು. ಷೇಕ್ಸ್‌ಪಿಯರ್‌ನನ್ನು ಇಂಗ್ಲೆಂಡ್ ಹಾಡಿ ಹುರುಪ್ಪೊಂದಿತು. ಅದೇ ರೀತಿ ಪಂಪನಂತಹ ಅದ್ವಿತೀಯ ಮಹಾಕವಿ, ವಿಭೂತಿಪುರುಷನು ಉದಯಿಸಿದರೆ ಪುಣ್ಯಪರಿಪಾಕವೆಂದು ತಿಮ್ಮಪ್ಪಯ್ಯ ಹೇಳುತ್ತಾರೆ. ಪಂಪನ ಹಿರಿಯ ಹುಟ್ಟೂರು 'ವೆಂಗಿಪಳು' ಆದರೂ, ಪಂಪ ಹುಟ್ಟಿ ಬೆಳೆದ ನಾಡು ಯಾವುದೆಂದು ತಿಳಿಯದು. ಪುಲಿಗೆರೆಯೆಂದು ಹೇಳಬಹುದಾದರೂ ಅದಕ್ಕೆ ಇನ್ನೂ ವಾದಗಳಿವೆ. ಪಂಪ ಮಹಾಕವಿಯ ಮಹಿಮೆ ಹರಡಬೇಕಾದರೆ ಅವನಿಗೆ ಆಶ್ರಯ ನೀಡಿದ ಚಾಲುಕ್ಯಚಕ್ರವರ್ತಿ ಎರಡನೆಯ ಅರಿಕೇಸರಿಯೇ ಕಾರಣಭೂತನು ಎಂದು ನಿರ್ಧರಿಸಿದ ತಿಮ್ಮಪ್ಪಯ್ಯನವರು, ಅರಿಕೇಸರಿಯ ಚರಿತ್ರೆಯ ಕಡೆ ಗಮನ ಹರಿಸುತ್ತಾರೆ. ಅರಿಕೇಸರಿಯ ಚರಿತ್ರೆಯನ್ನರಿತರೆ ಮಾತ್ರ ಪಂಪನ ಗೊತ್ತುಗುರಿ ಜಾಣ್ಮೆಗಳನ್ನು ಓರೆಗೆ ಹಚ್ಚಲು ಸಾಧ್ಯ ಎನ್ನುವರು.

ಅರಿಕೇಸರಿ ಚಾಲುಕ್ಯ ಚರಿತ್ರೆಯೊಳಗೆ ಮಧ್ಯಭಾಗಕ್ಕೆ ಕಡಗೆ ಸೇರಿದವನು. ಹೀಗಾಗಿ ತಿಮ್ಮಪ್ಪಯ್ಯನವರು ಇಡೀ ಚಾಲುಕ್ಯ ವಂಶದ ಚರಿತ್ರೆಗೆ ಕೈಹಾಕುತ್ತಾರೆ. ಈ ಪ್ರಯತ್ನದಲ್ಲಿ ಅವರು ಹೇಳುವುದೆಲ್ಲಾ ಸಿದ್ಧಾಂತವಲ್ಲ. ಚಾಲುಕ್ಯ ಚರಿತ್ರೆಯ ವಿಮರ್ಶೆಗೆ ಕೈ ನೀಡಿದ್ದಾರಷ್ಟೇ. ಶ್ರೀಯುತರು ಮತ್ತೋರ್ವ ವಿದ್ವಾಂಸರಾದ ಡಾ. ರಾಮಕೃಷ್ಣ ಭಂಡಾರ್ಕರವರ 'ದಕ್ಷಿಣ ಪೂರ್ವೇತಿಹಾಸ' ಎಂಬ ಗ್ರಂಥವನ್ನು ಆಧರಿಸಿ, ಚಾಲುಕ್ಯರ ವಂಶ ವೃಕ್ಷವನ್ನು ಕೊಡುತ್ತಾರೆ. ಅನಂತರ ಪಂಪನ 'ವಿಕ್ರಮಾರ್ಜುನ ವಿಜಯ'ದ ಆಧಿ ಭಾಗದಲ್ಲಿ ಪಂಪ ತನ್ನೊಡೆಯನಾದ ಅರಿಕೇಸರಿಯ ವಂಶವಾಳಿಯನ್ನು ನಿರೂಪಿಸಿರುವುದನ್ನು ವಿವರಿಸುತ್ತಾರೆ. ಅಲ್ಲದೇ ಅರಿಕೇಸರಿಯ ' ವೇಮುಲವಾಡು'ದ ಶಾಸನ ಮತ್ತು ಅವನ ಮೊಮ್ಮಗನಾದ ಅರಿಕೇಸರಿಯ 'ಪರಿಭಣಿ'ಯ ತಾಮ್ರ ಪಟಗಳಲ್ಲೂ ಅರಿಕೇಸರಿಯ ವಂಶಾವಳಿಯಿರುವುದನ್ನು ಗುರುತಿಸಿ, ಆ ಮೂರರಲ್ಲೂ ಇರುವ ಚಾಲುಕ್ಯರ ವಂಶವೃಕ್ಷದ ಪಟ್ಟಿಯನ್ನು ಕೊಡುತ್ತಾರೆ. ಅನಂತರ ಮೂರರಲ್ಲೂ ವಂಶಚಿತ್ರಗಳಿಗೆ ಸಂವಾದಿ

ಇದೆಯೆಂಬುದನ್ನು ತೋರಿಸುತ್ತಾರೆ. ಅಲ್ಲದೆ ಶಾಸನಸ್ಥಳಗಳೊಳಗಿನ ವೆಮುಲವಾಡವು ಹೈದರಾಬಾದಿನ ನಿಜಾಮ ರಾಜ್ಯದ ಕರೀಮ್ ನಗರ ಜಿಲ್ಲೆಯಲ್ಲೂ, 'ಪರಭಣಿ' ಎಂಬುದು ಅದೇ ರಾಜ್ಯದ ಔರಂಗಾಬಾದ್ ಜಿಲ್ಲೆಯದು ಎಂಬುದನ್ನು ಕಂಡುಹಿಡಿಯುತ್ತಾರೆ.

ಚಾಲುಕ್ಯರು ಮತ್ತು ರಾಷ್ಟ್ರಕೂಟರು ವೈರಿಗಳಾಗಿದ್ದಂತೆ, ಸಂಬಂಧಿಕರು ಆಗಿದ್ದರು. ಅಂದರೆ ಅವರಿಬ್ಬರಲ್ಲಿ ಪರಸ್ಪರ ಕೊಳು-ಕೊಡುಗೆ ಸಂಬಂಧವಿತ್ತೆಂದು ನಿದರ್ಶನ ಕೊಟ್ಟು ಸಮರ್ಥಿಸುತ್ತಾರೆ. ಉದಾ: ಅರಿಕೇಸರಿಯ ತಾಯಿಯಾದ ಜಾಕವ್ವ ರಾಷ್ಟ್ರಕೂಟರ ಇಂದ್ರನ ತಂಗಿ ಆಗಿದ್ದಳು. ಹೀಗೆ ಸಾಗುವ ತಿಮ್ಮಪ್ಪಯ್ಯನವರ ಪ್ರವಾಸ ಚಾಲುಕ್ಯ ವಂಶದ ಮೊದಲು ಚಕ್ರವರ್ತಿ ಯುದ್ಧಮಲ್ಲನ ಚರಿತ್ರೆಯಿಂದ ಹಿಡಿದು, ಅರಿಕೇಸರಿ ತಂದೆ-ತಾಯಿಯ ಬಗೆಗೆ ವಿವರಣೆ ನೀಡುತ್ತಾರೆ. ಭದ್ರದೇವನ ಮಗನಾದ ಮೂರನೇ ಅರಿಕೇಸರಿ ಬರೆಸಿದ 'ಪರಿಮಣಿ' ತಾಮ್ರ ಶಾಸನದಲ್ಲಿ " (ಲೆಂ) ಬಳಪಾಟಕನಾಮದೇಯ ನಿಜರಾಜದಾನ್ಯಾಂ"[೧] ಎಂದೂ ವೇಮುಲವಾಡದ ಶಾಸನದಲ್ಲಿ "ಲೆಂಬುಳವಾಟಕಪತ್ತನೇ"[೨] ಎಂದೂ ರಾಜಧಾನಿಗಳ ಹೆಸರು ತೋರುತ್ತಿರುವುದನ್ನು ದಾಖಲಿಸುತ್ತ, ಲೆಂಬುಳವಾಡುವೇ ಪರಂಪರೆಯಿಂದ ಬಂದ ಹೆಸರೆಂದೂ ವೇಮುಲವಾಡವೆಂಬುದು ಆಧುನಿಕವಾಗಿ ತಲೆಎತ್ತಿದ ಹೆಸರೆಂದೂ ಸಿದ್ಧಿಸುತ್ತಾರೆ.

ಚಾಲುಕ್ಯರಲ್ಲಿ ಬಾದಾಮಿ ಮತ್ತು ವೆಂಗಿ ಎಂಬ ಶಾಖೆಗಳಲ್ಲದೆ ಎರಡನೆಯ ಪುಲಿಕೆಶಿಯ ಮಗನಾದ ಜಯಸಿಂಹವರ್ಮನಿಂದೊಗೆದು ವಿಸ್ತರಿಸಿದ ಲಾಟದ ಚಾಲುಕ್ಯ ಶಾಖೆಯೊಂದಿದೆ. ಈ ಶಾಕೆಯವರನ್ನು ಬೋದನ - ಚಿತ್ರಕೂಟಗಳ ಚಾಲುಕ್ಯರು ಇಲ್ಲವೆ ಲೆಂಬುಳವಾಟದ ಚಾಲುಖ್ಯರು ಎಂದು ಕರೆಯಬಹುದು. ಈ ಕುಲದೊಳಗೆ ಬರುವ ಎರಡನೇ ಅರಿಕೇಸರಿ ರಾಷ್ಟ್ರಕೂಟ ಪೀಠಕ್ಕೆ ಬಾಗಿದ ಸಾಮಂತ ಚೂಡಾಮಣಿಯಾಗಿದ್ದಾನೆ. "ಪಂಪ ಮಹಾಕವಿಯ ವಿಕ್ರಮಾರ್ಜುನ ವಿಜಯ ಮಹಾಕಾವ್ಯವು ಈ ಅರಿಕೇಸರಿಯ ರಾಜಧರ್ಮ ತತ್ಸಾಧಕ ಶಕ್ತಿ ಮೊದಲಾದ ಆದರ್ಶ ಗುಣಗಳನ್ನು ವರ್ಣಿಸಲಿಕ್ಕಾಗಿಯೇ ತಲೆದೋರಿದೆ"[೩] ಎನ್ನುವ ತಿಮ್ಮಪ್ಪನಯ್ಯ ಅವುಗಳ ಸಾರವನ್ನು ವಾಚಕರು ಅದರಿಂದಲೇ ಹೀರಿಕೊಂಡು ಕೃತಾರ್ಥರಾಗಬೇಕು ಓದುಗರನ್ನು ಪ್ರಾರ್ಥಿಸುತ್ತಾರೆ.

## ಪಂಪ ಮಹಾಕವಿ

ಹಿಂದಿನ ಭಾಗದಲ್ಲಿ ನಾಯಕನ ಚಾರಿತ್ರಿಕ ವಿಚಾರ ಮಾಡಿದ ತಿಮ್ಮಪ್ಪಯ್ಯನವರು ಮುಂದೆ ಕವಿಯ ವಂಶವನ್ನು ಕುರಿತು ನಾಲ್ಕು ಮಾತನಾಡುತ್ತಾರೆ. ಪಂಪನು ತನ್ನ 'ಆದಿಪುರಾಣ'ದಲ್ಲಿ ತನ್ನ ದೊರೆಯ ಕುಲವನ್ನು

೧. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೪೮
೨. ಅದೇ ಪುಟ ೪೮
೩. ಅದೇ ಪುಟ ೫೨

ವಿವರಿಸಲು ಸಾಧ್ಯವಾಗಲಿಲ್ಲ. ಅದರಂತೆ ತನ್ನ ವಿಷಯವನ್ನು ಹೇಳಲೂ ಸಾಧ್ಯವಾಗಲಿಲ್ಲ. ಆದುದರಿಂದ ಪಂಪನು ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಮೊದಲು ದೊರೆಯ ಪರಂಪರೆಯನ್ನು ರಚಿಸಿ ಕೊನೆಯಲ್ಲಿ ತನ್ನದನ್ನು ಹೇಳಿಕೊಳ್ಳುತ್ತಾನೆ. ದಿವ್ಯ ನಾಯಕನಿಗೂ, ತನ್ನ ದೊರೆಗೂ 'ತಗುಳ್ಚಿ' ಸಂದಭವಿದೆ. ತನ್ನ ವಿಷಯಕ್ಕೂ, ಕಾವ್ಯಕ್ಕೂ ಅಂಥ ಸಂಬಂಧವಿಲ್ಲದಿರುವುದರಿಂದ ಪಂಪ ಈ ಕ್ರಮ ಅನುಸರಿಸಿರಬೇಕೆನ್ನುತ್ತಾರೆ. ತಿಮ್ಮಪ್ಪಯ್ಯನವರು, 'ವಿಕ್ರಮಾರ್ಜುನ ವಿಜಯ'ದಲ್ಲಿ ಪಂಪನ ವಂಶಚಿತ್ರವು ಈ ರೀತಿ ಇದೆ - ''ಮಾದವ ಸೋಮಯಾಜಿ - ಅಭಿಮಾನಚಂದ್ರ - ಕೊಮರಯ್ಯ - ಅಭಿಮದೇವರಾಯ - ಪಂಪ''.

ಇವರಲ್ಲಿ ಸೋಮಯಾಜಿಯ ನೆಲೆಯೂರು 'ವೆಂಗಿಪಳು'. ಇವನು ಬೇರೆ ನಾಡಿನಿಂದ ಬಂದು ಅಲ್ಲಿ ನೆಲೆಸಿದವನಲ್ಲ. ಪರಂಪರೆವಿಡಿದು ಅಲ್ಲೇ ಹುಟ್ಟಿ ಬೆಳೆದವನು. ಮಾಧವನ ಯಾಜಿತ್ವವನ್ನು ಕವಿ ಮುಂದೆ ಬಣ್ಣಿಸುತ್ತಾನೆ. ''ಆತನ ಹೋಮಮಂತ್ರ ಚಕ್ರಕ್ರಮ'' ಸಂದರ್ಭದಲ್ಲಿ ಒಂದಿಪ್ಪಾದರೂ ಮಿಡಿಕಿದರೆ ಶಾಪವನ್ನೀವನೆಂದೇ 'ಶಕ್ರ ಶಶಾಂಕ ಸೂರ್ಯ ಪದಮಾನ'ರೇ ಮೊದಲಾದ ದೇವತೆಗಳೂ 'ದಿಕ್ಚಕ್ರ'ವೂ 'ಅಂಜಿ ಬೆರ್ಚಿ ಬೆಸಕೆಯುವದು' ಅಷ್ಟೆ ಮಾತ್ರವಲ್ಲ. ಆ ಭೀತಿ ಲೋಕದಲ್ಲೆಲ್ಲಾ ಹಬ್ಬುತ್ತಿರುಲು ಸೋಮಯಾಜಿಯಾದ ಮಾಧವನು 'ಸರ್ವಕ್ರತುಯಾಜಿ'[೪]ಯೂ ಆದನಂತೆ. ಸೋಮಯಾಜಿ ಮತ್ತವನ ಮಗ ಅಭಿಮಾನಚಂದ್ರರ ನಡುವೆ ಹೊಳೆದು ತೋರುವ ವ್ಯತ್ಯಾಸವೆಂದರೆ ಕರ್ಮಠನಾದ ಅಗ್ರಹಾರ ಪ್ರಮುಖನಾದ ತಂದೆ, ತನ್ನ ವೈದಿಕ ವೃತ್ತಿಯಿಂದ ಧನಸಂಗ್ರಹ ಮಾಡಿದರೆ, ಮಗನು ಆ ಸಾರವಸ್ತುಗಳನ್ನೆಲ್ಲಾ ದಾನಮಾಡಿದನು. ಅಭಿಮಾನಚಂದ್ರನು ಅಸಮಾನ ದಾನಿಯಾಗಿದ್ದರೆ, ಅವನ ಮಗನಾದ ಕೊಮರಯ್ಯನು ಅಸಾಧಾರಣ ವಿದ್ಯಾವಂತನು. ಇವನ ಮಗನಾದ ಅಭಿರಾಮ ದೇವರಾಯನು ''ಜಿನೇಂದ್ರ ಧರ್ಮವೇ ವಲಂ ದೊರೆ ಧರ್ಮದೊಳೆಂದು ನಂಬಿದವನು. ಮಾತ್ರವಲ್ಲದೆ ಆ ಜಿನೇಂದ್ರ ಧರ್ಮವನ್ನವಲಂಬಿಸಿ ತನ್ನ ವಿಪ್ರ ಜಾತಿಯನುತ್ತರೋತ್ತರಮೆ ಮಾಡಿ''[೫] ಆತ್ಮವಿಖ್ಯಾತಿಯನ್ನು ಹರಡಿದವನು. ಇವನ ಮಗನು ಮಹಾಕವಿ ಪಂಪ.

ಹೀಗೆ ಪಂಪನ ವಂಶವೃಕ್ಷವನ್ನೆಲ್ಲಾ ಜಾಲಾಡಿದ ತಿಮ್ಮಪ್ಪಯ್ಯನು 'ಪಂಪ' ಪದ ಉತ್ಪತ್ತಿಯ ಕಡೆಗೆ ಗಮನ ಹರಿಸುತ್ತಾರೆ. 'ಪಂಪ' ಎಂದು ಅವನೇ ತನ್ನ ಹೆಸರು ಹೇಳಿಕೊಂಡಿರುವಾಗ ಅದನ್ನೇನು ವಿಮರ್ಶಿಸುವುದು ಎಂದು ಓದುಗ ಕೇಳುವ ಪ್ರಶ್ನೆಗೆ, ತಿಮ್ಮಪ್ಪನಯ್ಯನವರು ಅವನ ಹೆಸರು ಸಂಸ್ಕೃತವೋ, ತದ್ಭವವೋ, ದೇಸಿಯೋ ಎಂಬುದನ್ನು ವಿಮರ್ಶೆಯ ಒರಗಿಟ್ಟು ನೋಡುವುದೇ ನಮ್ಮೆಣಿಕೆ ಎನ್ನುತ್ತಾರೆ. ಅವರ ವಿಚಾರಣೆಯ ಪ್ರಕಾರ ಪದ್ಮಾಕರವೇ 'ಪಮ್ಮಾರ ಪಮ್ಮಾ- ಪಂಬಾ ಆಗಿ ಹರಿದು 'ಪಂಪಾ' ಆಗಿರಬಹುದು. ಪಂಪ ಹೆಸರಿನ ಉತ್ಪತ್ತಿಗಾಗಿ ತಿಮ್ಮಪ್ಪಯ್ಯನವರು ಕ್ಷೇತ್ರಕಾರ್ಯ ನಡೆಸಿ, ಅನೇಕರನ್ನು

---

೪. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೫೫

೫. ಅದೇ ಪುಟ ೬೪

ಸಂದರ್ಶಿಸಿ ಮಾಹಿತಿ ಸಂಗ್ರಹಿಸಿದ್ದಾರೆ. ಕೊನೆಯದಾಗಿ ನಮ್ಮಲ್ಲಿ ದೇವರ ಹೆಸರನ್ನು ಮಕ್ಕಳಿಗಿಡುವಂತೆ, ಜೈನರಲ್ಲಿ ತೀರ್ಥಂಕರ ಹೆಸರನ್ನು ಇಡುವುದು ಬಳಕೆಯಾಗಿದೆ'ಪದ್ಮಪ್ರಭ' ಎಂಬುದು ಆರನೇಯ ತೀರ್ಥಂಕರನ ಹೆಸರು. ಈ ಪದ್ಮಪ್ರಭ - ಪದ್ಮಪ್ಪ, ಪದ್ಮಪ, ಪದ್ದಪ, ಪಮ್ಮಪ ಎಂದು ತಿರುಗುತ್ತ, ನಡುವಣ 'ಮ್ಮ'ಕಾರವು ಸೊನ್ನೆಯಾಗಿ 'ಪಂಪ' ಎಂದಾಗಿರಬಹುದು ಊಹಿಸಿ, ಆದಕ್ಕೆ ಆಧಾರಗಳನ್ನು ಕೊಟ್ಟು 'ಪಂಪ' ನಾಮದ ಮೂಲರೂಪವು 'ಪದ್ಮಪ' ಎಂದಿದ್ದಿರಬೇಕೆಂಬುದು ನಮ್ಮ ನಮಃ ಪೂರ್ತವಾದೆಣಿಕೆ ಎಂದು ಅಭಿಪ್ರಾಯ ಪಡುತ್ತಾರೆ. ಅದಕ್ಕೆ 'ವಿಕ್ರಮಾರ್ಜುನ ವಿಜಯ'ದ ಒಂದು ಕಂದಪದ್ಯವನ್ನು ನಿದರ್ಶನವಾಗಿ ಕೊಡುತ್ತಾರೆ.

"ಪಂಪಂ ಧಾತ್ರೀವಳೆಯ ನಿ  
ಳಿಂಪಂ ಚತುರಂಗ ಬಲ ಭಯಂಕರಣಂ ನಿ  
ಷ್ಕಂಪಂ ಲಲಿತಾಲಂಕಂ  
ಣಂ ಪದ್ಮ(ದ್ದ) ಪನೇಕರೂಪನಪಗತ ಪಾಪಂ"[೬]

## ವೆಂಗಿಮಂಡಲ

ಪಂಪ ಮತ್ತು ಅರಿಕೇಸರಿಯ ಕುಲಕ್ಕೆ ಗಣೆಯಾದ ವೆಂಗಿಮಂಡಲ, ವೆಂಗಿಪಳುಗಳ ಸ್ವರೂಪವೇನೆಂದು ವಿಚಾರಿಸಿಕೊಳ್ಳಲು ತಿಮ್ಮಪ್ಪನಯ್ಯನವರು ಒಂದು ಅಧ್ಯಾಯನವನ್ನೇ ಬರಿದಿದ್ದಾರೆ. ವೆಂಗಿಮಂಡಲ-ವೆಂಗಿವಿಷಯ ಎಂಬ ದೇಶಗಳು ತಮಗೆ ಸೇರಿದವೆಂಬುದು ಆಂಧ್ರರ ಹೇಳಿಕೆಯಾಗಿದೆ. ಈ ನಾಡಿನ ಬಹುಭಾಗ ಆಂಧ್ರ ಭಾಷೆಯನ್ನಾಡುತ್ತಿದ್ದುದ್ದೇ ಅದಕ್ಕೆ ಕಾರಣವಿರಬೇಕು. ಈ ಕಾರಣವನ್ನು ಸರಿಯಾಗಿ, ಯುಕ್ತರೀತಿಯಲ್ಲಿ ಚರ್ಚಿಸಿ, ವಾಚಕರ ಗಮನಕ್ಕೆ ತರುವುದು ತಮ್ಮ ಉದ್ದೇಶವೇ ಹೊರತು, ಪಾತ್ರಲಾಭದ ದುರುದ್ದೇಶವೇ ಈ ಚರ್ಚೆಯ ಉದ್ದೇಶವೆಂದು ಯಾರೂ ಶಂಕಿಸಬಾರದೆಂಬ ಎಚ್ಚರಿಕೆಯನ್ನು ಕೊಡುತ್ತಾರೆ. ವೆಂಗಿಮಂಡಲವಿದ್ದ ಭಾಗದ ಭಾಷೆ ಆಂಧ್ರವಾಗಿತ್ತೆಂದು ವಾದಿಸುವ ಆಂಧ್ರ ವಿದ್ವಾಂಸರು ಪಂಪನೂ ಸಹ ಆಂಧ್ರ ಬ್ರಾಹ್ಮಣವಂಶೀಯನೆಂದು ಸಿದ್ಧಾಂತಿಸುವರು. ಹಾಗೆ ನೋಡಿದರೆ ಕನ್ನಡ 'ಛಂದೋಂಬುಧಿ'ಯ ಕರ್ತೃ 1ನೇ ನಾಗವರ್ಮ, ಸೈಯಡಿಯಲ್ಲಿದ್ದ ಕನ್ನಡ 'ಪಂಚತಂತ್ರ' ಕಾರನಾದ ದುರ್ಗಸಿಂಹನೂ ಆಂಧ್ರನಾಗಬೇಕಾಗುತ್ತದೆ ಎಂದು ತಿಮ್ಮಪ್ಪಯ್ಯ ಪ್ರಶ್ನಿಸುತ್ತಾರೆ. "ಅಮಲಯಾಚಲ ಹಿಮಗಿರಿ ಸೀಮಾವನಿತಳ (ಕೆ) ಬೆಂಗಿಮಂಡಲದೊಳ್"[೭] ಎಂಬ ಪಂಪನ ಮಾತು ಮತ್ತು "ಕರ್ಣಾಟಕ ಧಾತ್ರೀ ತಿಲಕಮಕಿಲ ಜನವಿಖ್ಯಾತಂ ಕಿಸುಕಾಡು ನಾಡು"[೮] ಎಂದು ದುರ್ಗಸಿಂಹನ ಮಾತುಗಳನ್ನು ಪರಿಶೀಲಿಸಿದರೆ ವೆಂಗಿಮಂಡಲ ಕನ್ನಡನಾಡಿನದು ಎಂದು ತಿಮ್ಮಪ್ಪಯ್ಯನವರು ಅಭಿಪ್ರಾಯಪಡುತ್ತಾರೆ.

ವೆಂಗಿಯ ಪೂರ್ವ ಮತ್ತು ಪಶ್ಚಿಮಗಳೆಂಬ ಭೇದವಾಗಿತ್ತು ಅವುಗಳಲ್ಲಿ ಮೂಡಣ ನಾಡಿನ ನುಡಿ ತೆಲುಗಾದರೆ, ಪಡುವಣದು ಕನ್ನಡವಾಗಿತ್ತು. ಪಡುವಣ ಪ್ರಾಂತವಾದ ವೆಂಗಿಪಳುವಿನಲ್ಲಿ ಕನ್ನಡ ಜನಪದ

---

೬. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೬೪  
೭. ಅದೇ ಪುಟ ೬೮  
೮. ಅದೇ ಪುಟ ೭೫

ಭಾಷೆಯಾಗಿತ್ತು. ಇದನ್ನು ಸಿದ್ಧಿಸಲು 'ವಿಕ್ರಮಾರ್ಜುನ ವಿಜಯ'ದ ಪದ್ಯವನ್ನು ಮತ್ತು ವೇಮುಲವಾಡದ ಶಾಸನ ಸಾರಾಂಶವನ್ನು ಕೊಡುತ್ತಾರೆ. ಮುಂದೆ 'ಬೆಳ್' ಪದದಿಂದ 'ಬೆಂಗಿ' ಎಂದಾದ್ದು, ಬೆಳ್ವಾಡಿನ ಸೀಮೆ, ಬೇಕನಾಟ ಪದ ವಿಮರ್ಶೆಗೆ ತೊಡಗುತ್ತಾರೆ. ಕೊನೆಯದಾಗಿ ಆಧುನಿಕ ವಿದ್ವಾಂಸರು ವಿಶ್ಲೇಷಿಸಿದ ದ್ರಾವಿಡ ಭಾಷಾಸ್ಕಂದ ತಮಿಳು ಪದದ ರೂಪ ನಿಷ್ಪತ್ತಿ ಆಂಧ್ರ ಪದದ ನಿಷ್ಪತ್ತಿ ಮತ್ತು 'ಕನ್ನಡ'ದ ಸ್ವರೂಪ ಇವುಗಳ ಬಗೆಗೆ ವಿಮರ್ಶೆ ಮಾಡುತ್ತಾರೆ.

ಒಟ್ಟಾರೆಯಾಗಿ ಪಂಪನ ಕಾಲದಿಂದ ಅನಂತರವೂ ಪಶ್ಚಿಮ ವೆಂಗಿಯೊಳಗಿನದ್ದಾಗಿದ್ದ ವೆಂಗಿಪಳು ಆಂಧ್ರದೇಶದ ಪಶ್ಚಿಮ ಪರ್ವತಾವಳಿಯಲ್ಲಿದ್ದು, ಕರ್ನಾಟಕ ಧಾತ್ರೀತಿಲಕವಾಗಿಯೇ ನಿಲ್ಲುತ್ತದೆಯೋ ಹೊರತು ಆಂಧ್ರ ದೇಶದೊಳಗೆ ಇದ್ದಿಲ್ಲ. ಆದುದರಿಂದ ಆಂಧ್ರವಿದ್ವಾಂಸರು ಪಂಪನನ್ನು ಆಂಧ್ರ ಬ್ರಾಹ್ಮಣನೆಂಬ ಭ್ರಮೆಯನ್ನು ಬಿಡಬೇಕೆಂದು ತಿಮ್ಮಪ್ಪಯ್ಯನವರು ಪ್ರಾರ್ಥಿಸುತ್ತಾರೆ.

## ಪಂಪನೂ ಅವನ ಕಾವ್ಯಗಳು

ಅರಿಕೇಸರಿಯಾಳಿದ ನಾಡಾವುದು, ರಾಜಧಾನಿಯಾವುದು ಎಂಬ ವಿಷಯ 'ವಿಕ್ರಮಾರ್ಜುನ ವಿಜಯ'ದಲ್ಲಿ ಗೊತ್ತಾಗದಿದ್ದರೂ, ವೇಮುಲವಾಡ ಶಾಸನ, 'ಪರಭಣಿ' ತಾಮ್ರಶಾಸನದಿಂದ ಅರಿಕೇಸರಿಯ ನಾಡು ವೇಮುಲವಾಡವೆಂದು ತೋರುತ್ತದೆ. ಈ ಕಾರಣದಿಂದ ಪಂಪನೂ ಅಲ್ಲಿಯೇ ಹುಟ್ಟಿ ಬೆಳೆದು, ಅರಿಕೇಸರಿಯ ಆಸ್ಥಾನವನ್ನೊಂದಿದನು ಎಂದು ಭಾವಿಸಬಹುದು. ಆದರೆ ಪಂಪನು '' ಸಾಜದ ಪುಲಿಗೆಯ ತಿರುಳ ಕನ್ನಡದೊಳ್ ನಿರ್ವ್ಯಾಜದೆಸಕದೊಳೆ''[೯] ಎಂಬ ಹೇಳಿಕೆಯನ್ನು ಗಮನಿಸಬೇಕು. ಪುಲಿಗೆರೆಯ ತಿರುಳ ಕನ್ನಡವು ಪಂಪನ ಕವಿತೆಯ ಸಾಜವಾಗಿ ತೋರುತ್ತಿದೆ. ಒಂದು ವೇಳೆ ಪಂಪ ಪುಲಿಗೆರೆಯಲ್ಲಿ ಹುಟ್ಟದಿದ್ದರೆ ಕನ್ನಡವು ಅವನಲ್ಲಿ ಇಷ್ಟು ಸಾಜವಾಗಿ ಬರುತ್ತಿರಲಿಲ್ಲ ಎಂದು ವಿಚಾರಮಾಡಬಹುದು. ಅಲ್ಲದೆ ರನ್ನನು ತನ್ನ 'ಅಜಿತಪುರಾಣ'ದಲ್ಲಿ ಒಂದು ಪದ್ಯದಲ್ಲಿ ''ರಟ್ಟರಾಜ್ಯದೊಳ್ ಮುನ್ನ ಪಂಪನಂ ಪೊನ್ನಿಗನುಂ''[೧೦] ಎನ್ನುತ್ತಾನೆ. ರಟ್ಟರಾಜ್ಯ ಎಂದರೆ ರಾಷ್ಟ್ರಕೂಟರದು. ಅರಿಕೇಸರಿ ರಾಷ್ಟ್ರಕೂಟರ 'ಸಾಮಂತ ಚೂಡಾಮಣಿ'ಯಾದುದರಿಂದ, ಆ ಲೆಂಬುಳವಾಟವೂ ಪರಂಪರೆ ಮಿಡಿದು ರಟ್ಟರಾಜ್ಯದಲ್ಲಿ ಅಂತರ್ಗತವಾಗಿತ್ತು ಎಂಬುದು ರನ್ನನ ಅಭಿಪ್ರಾಯವಾಗಿದೆ, ಅಥವಾ ಆಗಿನ ಕಾಲದಲ್ಲಿ ಪಂಪನು ರಟ್ಟರಾಜ್ಯದೊಳಗಿನ ತನ್ನ ಹುಟ್ಟೂರಾದ ಪುಲಿಗೆರೆಯಲ್ಲಿ ಇದ್ದುಕೊಂಡು ತನ್ನ ಕೃತಿಗಳನ್ನು ರಚಿಸಿರಬಹುದು.

ಪಂಪನು ಅರಿಕೇಸರಿಯ ಆಸ್ಥಾನಕ್ಕೆ ಬರುವುದಕ್ಕೆ ಮೊದಲು ಯಾವ ಪ್ರಾಂತದಲ್ಲಿ ಇದ್ದಿರಬಹುದೆಂಬದರ ಕಡೆಗೆ ಗಮನ ಹರಿಸುತ್ತಾರೆ. ಶ್ರವಣಬೆಳಗೊಳದ ಅರವತ್ತಾರನೆಯ ಶಾಸನದ ಪ್ರಕಾರ ಪಂಪನ ಗುರು

---

೯. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೧೦೯
೧೦. ಅದೇ ಪುಟ ೧೧೧

ದೇವೇಂದ್ರಮುನಿ. ಈ ಕುಲಗುರುವು ಪುಲಿಗೆರೆ ಪ್ರಾಂತವನ್ನೊಂದಿದ ಕನ್ನಡದ ತೆಂಕನಾಡಿನಲ್ಲಿ ಯಾವ ಕಡೆಯಲ್ಲೂ ಇದ್ದಿರಬಹುದು. ''ಶ್ರವಣಬೆಳಗೊಳದಲ್ಲಿಯೇ ಅಥವಾ ಜೈನ ಸಂಸ್ಕೃತಿಗೆಡೆಯಾದ ಪುಲಿಗೆರೆಯೇ ಮೊದಲಾದ ಈ ಕನ್ನಡ ನಾಡುಗಳೊಳಗೊಂದರಲ್ಲಿಯೇ ಅದು ಇದ್ದಿರಬೇಕೆಂದು ಅನುಮಾನಿಸಿದರೆ ತಪ್ಪಾಗದು''[೧೧]. ವೆಂಗಿಪಳುವನ್ನು ತೊರೆದ ಪಂಪನ ತಂದೆ ಅಭಿರಾಮದೇವನು ಪುಲಿಗೆರೆ ಪ್ರಾಂತದಲ್ಲಿ ನೆಲೆಸಿ, ಆ ಗುರುಕುಲದ ಮುನೀಂದ್ರರಲ್ಲಿ ವಿದ್ಯಾಭ್ಯಾಸಕ್ಕಾಗಿ ಕಿರಿಹರೆಯದ ಮಗನನ್ನು ಕಳುಹಿಸಿರಬೇಕೆ. ಈ ಗುರುಕುಲದಲ್ಲಿ ಪಂಪನ ಪ್ರತಿಭೆ ಕುದುರಿ, ಅವನ ಕೀರ್ತಿ ಎಲ್ಲಾ ಕಡೆ ಪಸರಿಸಿ, ವಿಚಾರಪೂರ್ವಕವಾಗಿ ಪಂಪನು ಅರಿಕೇಸರಿಯ ಆಸ್ಥಾನವನ್ನು ಸೇರಿಸಬೇಕೆಂದು ತಿಮ್ಮಪ್ಪಯ್ಯನವರು ಭಾವಿಸುತ್ತಾರೆ. ಪಂಪನ ವಯಸ್ಸು, ಅರಿಕೇಸರಿಯ ಮನಸ್ಸು ಹೆಚ್ಚು ಕಡಿಮೆ ಒಂದೇ ಆಗಿದ್ದು, ಅದರೊಳಗೆ ಕೆಳೆತನವು ಬಲಿದಿರಬೇಕು.

ಪಂಪ ಬರೆದಿದ್ದು ಸಮಸ್ತ ಭಾರತ (ವಿಕ್ರಮಾರ್ಜುನ ವಿಜಯ) ಮತ್ತು 'ಆದಿಪುರಾಣ' ಎಂಬ ಎರಡು ಮಹಾಕಾವ್ಯಗಳನ್ನು. ಇವುಗಳಲ್ಲಿ 'ಆದಿಪುರಾಣ'ವನ್ನು ಶಾ.ಶ. 863 (ಕ್ರಿ.ಶ.941) ರಲ್ಲಿ ಬರೆದುದಾಗಿ ಅವನೇ ಪುರಾಣದ ಅಂತ್ಯದಲ್ಲಿ ಹೇಳಿದ್ದಾನೆ. ಆದರೆ 'ವಿಕ್ರಮಾರ್ಜುನ ವಿಜಯ'ದ ಕಾಲವನ್ನು ಹೇಳಿಲ್ಲ. ಈ ಕುರಿತು 'ವಿಕ್ರಮಾರ್ಜುನ ವಿಜಯ'ದ ಮಾನ್ಯ ಸಂಪಾದಕರು ಕಾ.ಶ.863 (ಕ್ರಿ.ಶ.941) ರಲ್ಲಿಯೇ ಎರಡು ಕೃತಿಗಳನ್ನು ರಚಿಸುವುದಾಗಿ ಹೇಳುತ್ತಾರೆ. ಈ ವಿಚಾರದಲ್ಲಿ ತಿಮ್ಮಪ್ಪಯ್ಯನವರು ಒಂದೇ ವರ್ಷದಲ್ಲಿ ಪಂಪನು ತನ್ನ ಎರಡು ಮಹಾಕಾವ್ಯಗಳನ್ನೂ ಬರೆದನೆಂದು ಭಾವಿಸಬಾರದೆಂದು ಹೇಳಿ ಅದನ್ನು ಹಲವಾರು ನಿದರ್ಶನಗಳನ್ನು ಕೊಟ್ಟು ಸಾಧಿಸುತ್ತಾರೆ.

ತಿಮ್ಮಪ್ಪಯ್ಯನವರು 'ಆದಿಪುರಾಣ'ದ ಭರತ ಮತ್ತು 'ವಿಕ್ರಮಾರ್ಜುನ ವಿಜಯ'ದ ಅರ್ಜುನರೊಳಗಿರುವ ಹೋಲಿಕೆಗಳ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ. ಭರತನಿಗೆ ಸುಭದ್ರೆಯೆಂಬ ರಾಣಿಯಿದ್ದಳು. ಅರ್ಜುನನೂ ಬಲರಾಮ ಕೃಷ್ಣರ ತಂಗಿಯಾದ ಸುಭದ್ರೆಯನ್ನು ವಿವಾಹವಾಗಿದ್ದನು. ಭರತನಂತೆ. ಅರ್ಜುನನೂ ದಿಗ್ವಿಜಯವನ್ನೆಸಗಿದವನು. ಪುರಾಣದಲ್ಲಿ ಭರತನು ಆದಿರಾಜನಾಗಿದ್ದಾನೆ. 'ವಿಕ್ರಮಾರ್ಜುನವಿಜಯ'ದಲ್ಲೂ ಕಳೆದಿಯೊಬ್ಬಳು ಸುಭದ್ರ ''ಆದಿಪುರುಷಂಗೇಕೆ ನಂ ನಾಣ್ಚುವೈ''[೧೨] ಎಂದು ಹೇಳುತ್ತಾಳೆ. ಇಲ್ಲಿ ಆದಿಪುರುಷ ಪದವು ಅರ್ಜುನನಿಗೆ ಸಂಬಂಧವಾಗಿದೆ. ಈ ಕಾರಣದಿಂದ 'ಸಮಸ್ತ ಭಾರದ'ದ ಅರ್ಜುನನು ಕವಿದೃಷ್ಠಿಯಲ್ಲಿ 'ಆದಿಪುರಾಣ'ದ ಭರತನೊಡನೆಯೂ ಅಭಿನ್ನವಾಗಿ ಇರಬಹುದು. ನಮ್ಮ ಈ ಭಾವನೆಯನ್ನು ವಾಚಕರು ಅವಧರಿಸಿಕೊಳ್ಳಬೇಕೆಂದು ತಿಮ್ಮಪ್ಪಯ್ಯನವರು ಪ್ರಾರ್ಥಿಸುತ್ತಾರೆ.

---

೧೧. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೧೧೩

೧೨. ಅದೇ ಪುಟ ೧೧೯

## ಸಮಸ್ತ ಭಾರತವೂ ಅದರ ಕಾಲವೂ

ಪಂಪ ಈ ಕಾವ್ಯಕ್ಕೆ 'ಪಂಪಭಾರತ', 'ವಿಕ್ರಮಾರ್ಜುನ ವಿಜಯ' 'ಸಮಸ್ತಭಾರತ' - ಎಂಬ ಮೂರು ಹೆಸರುಗಳಿವೆ. ಈ ಶೀರ್ಷಿಕೆಗಳ ಔಚಿತ್ಯವನ್ನು ಮತ್ತು ಆ ಹೆಸರು ಬರಲು ಕಾರಣವನ್ನು ಲೇಖನದ ಪ್ರಾರಂಭದಲ್ಲಿ ಚರ್ಚಿಸುತ್ತಾರೆ. ಪಂಪನು ತನ್ನ ಕೃತಿಯನ್ನು ಅರಿಕೇಸರಿಯೊಂದಿಗೆ 'ತಗುಳ್ಚಿ' ಹೇಳಿರುವುದರಿಂದ ಚಾಲುಕ್ಯವಂಶ ಮತ್ತು ಸೋಮವಂಶವನ್ನು ಹೋಲಿಸಿರುವ ಪಟ್ಟಿಯನ್ನು ನಮಗೆ ಕೊಡುತ್ತಾರೆ. ಅಂದರೆ ಯುದ್ಧಮಲ್ಲ - ಸೋಮ, ಅರಿಕೇಸರಿ-ಭರತ, ನರಸಿಂಹ - ಪ್ರತಿಮೆ, ದಗ್ದಮಲ್ಲ - ಶಂತನ್ನು, ಬದ್ದೆಗ - ಭೀಷ್ಮ ದುಗ್ದಮಲ್ಲ - ವಿಚಿತ್ರಮೆರ್ಯ, ನರಸಿಂಹ + ಚೌಕಟ್ಟಿ - ಪಾಂಡು + ಕುಂತಿ, ಅರಿಕೇಸರಿ - ಅರ್ಜುನ ಹೀಗೆ ಚಾಲುಕ್ಯವಂಶ ಅರಸರನ್ನು ಮಹಾಭಾರತದ ಅರ್ಜುನನ ವಂಶಸ್ಥರೊಂದಿಗೆ ಹೋಲಿಸಿದ್ದಾನೆ. ಪಂಪನು ಭಾರತ ಕಥೆಯೊಡನೆ ಹೋಲಿಸಬೇಕಾದ ಅರಿಕೇಸರಿಯ ಇತಿಹಾಸದ ಕಥೆಯನ್ನು ತಿಮ್ಮಪ್ಪಯ್ಯನವರು ಸವಿವರವಾಗಿ ಕೊಡುತ್ತಾರೆ.

'ವಿಕ್ರಮಾರ್ಜುನ ವಿಜಯ'ದ ಸಂಪಾದಕರು ಪಂಪನು ದ್ರೌಪದಿಯ ವಿಷಯದಲ್ಲಿ ಕೃತಕೃತ್ಯನಾಗಲಿಲ್ಲ ಎಂಬ ಆಕ್ಷೇಪವನ್ನು ಎತ್ತುತ್ತಾರೆ. ದ್ರೌಪದಿಯು ಪಂಚಪತಿಯುಳ್ಳವಳು, ವ್ಯಾಸಭಾರತವನ್ನು ಆಧರಿಸಿ ಕಾವ್ಯ ಬರೆಯಲು ಹೊರಟ ಪಂಪನಿಗೆ ದ್ರೌಪದಿಯ ಪಂಚಪತಿತ್ವವನ್ನು ಹೇಗಾದರೂ ತೇಲಿಸಿಬಿಟ್ಟು, ದ್ರೌಪದಿಯನ್ನು ಅರ್ಜುನನಿಗೆ ಮಾತ್ರ ಮದುವೆ ಮಾಡಿಸಿ, ಮುಂದೆ ಅವಳ ವಿಚಾರದಲ್ಲಿ ಕೃತ್ಯನಾಗಲಿಲ್ಲ ಎನ್ನುತ್ತಾರೆ. ಪಂಪನು ಅರಿಕೇಸರಿಯನ್ನು ಅರ್ಜುನನೊಂದಿಗೆ ಹೋಲಿಸಿ ಕೃತಿ ರಚಿಸುತ್ತಿರುವುದರಿಂದ, ದ್ರೌಪದಿಯ ಪಾತ್ರ ಅಥವಾ ಸಂಬಂಧ ಎಲ್ಲೆಲ್ಲಿ ಬರುವುದೋ ಅಲ್ಲಲ್ಲಿ ಹೆಚ್ಚಾಗಿ 'ವಿಜಯಶ್ರೀ, ವೀರಶ್ರೀ, ಜಯವನಿತ' ಎಂಬ ಕಲ್ಪಿತ ದೇವತಾವ್ಯಕ್ತಿಯೊಡನೆ ಸಮಕಟ್ಟಿಕೊಂಡು ಮುಂದುವರಿಯುತ್ತಾನೆ. ಅಲ್ಲದೆ ತನ್ನದೊಂದು ವೃತ್ತದಲ್ಲ "ಮನಃ ಪ್ರಿಯ ಲಕ್ಷ್ಮೀ ವದನೇಂದು"[೧೩] ಎನ್ನವಲ್ಲಿ ಅರಿಕೇಸರಿಯ ಮನಃ ಪ್ರಿಯೆಯಾದ ಲೋಕಾಂಬಿಕೆಗೆ 'ಲಕ್ಷ್ಮಿ' ಎಂಬ ಹೆಸರಿಲ್ಲ. ಆದರಿಂದ ಈ 'ಪ್ರಿಯಲಕ್ಷ್ಮಿ' ಎಂದರೆ 'ವಿಜಯಶ್ರೀ' ಯಾದ ದ್ರೌಪದಿಯೇ ಎಂಬುದನ್ನು ನಾವು ಭಾವಿಸಬೇಕು. ಈ ಆಧಾರದಿಂದ ದ್ರೌಪದಿ ಎಂದರೆ 'ಆತ್ಮೀಯರಾದ ಚಾಲುಕ್ಯರಾಜ್ಯನಾದ ಅರಿಕೇಸರಿ ಪಡೆದ ವಿಜಯಶ್ರೀ ಎಂದು ಪರಿಭಾವಿಸಬೇಕು. ಈ ಕಾರಣದಿಂದಾಗಿ ಕವಿ ಪಂಚಪತಿತ್ವವನ್ನು ಮರೆಸುವಲ್ಲಿ ಕೃತಕೃತ್ಯನಾಗುವುದರ ಬದಲು ಈ ತೆರನಾದ ಐತಿಹಾಸಿಕ ಕಾವ್ಯವನ್ನು ವಸ್ತುರಚನಾ ಕೌಶಲದಿಂದ ಬರೆದ ಮಹಾಕವಿ ಕೃತಕೃತ್ಯನಾದನೆಂದು ಹೇಳಬೇಕೆಂದು ಪಂಪನ ಮೇಲಿದ್ದ ಆಕ್ಷೇಪವನ್ನು ತೊಡೆದುಹೊಕಲು ತಿಮ್ಮಪ್ಪಯ್ಯನವರು ಪ್ರಯತ್ನಿಸುತ್ತಾರೆ.

ಪಂಪನ 'ಸಮಸ್ತಭಾರತ'ದ ಕಾಲದ ಬಗ್ಗೆ ವಿಚಾರ ಮಾಡುತ್ತಾ, ಪಂಪನು ಮಹಾಭಾರತದ ಭೀಮನನ್ನು,

೧೩. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೧೭೬

ಚಾಲುಕ್ಯ ರಾಜಭೀಮನ ಎರಡನೆಯ ಅಮ್ಮರಾಜನಿಗೆ ಹೋಲಿಸಿದ್ದಾನೆ. ಇವನ ಶಾಸನ ಕ್ರಿ.ಶ. 945ಕ್ಕೆ ಸೇರಿದೆ. ಈ ಶಾಸನದ ರಚನೆಯ ಕಾಲದ ಆಧಾರದ ಮೇಲೆ ಸಮಸ್ತ ಭಾರತದ ನಿರ್ಮಾಣ ಕ್ರಿ.ಸ. ಸು. 945 ರಿಂದ 950ರ ಮಧ್ಯದಲ್ಲಿ ಆಗಿರಬೇಕೆಂದು ಊಹಿಸುತ್ತಾರೆ.

## ಕಾವ್ಯಧರ್ಮವೋ ಧರ್ಮವೋ

ಧರ್ಮವನ್ನು ಪಸರಿಸುವ ಉದ್ದೇಶದಿಂದಲೇ ರಾಮಾಯಣವು ಹುಟ್ಟಿಕೊಂಡಿತು. ಅನಂತರದಲ್ಲಿ ಕಾವ್ಯಪದ್ಧತಿ ಸನಾತನವಾಗಿ ಹರಿದುಬಂದಿತು. ಈ 'ಕಾವ್ಯಧರ್ಮ - ಧರ್ಮ' ಗಳೆರಡೂ ಪರಸ್ಪರ ಸಂಬಂಧವುಳ್ಳವು. ಕಾವ್ಯ ಧರ್ಮಪ್ರಸಾರದ ಮೂಲಕವೇ ಸಮಾಜದಲ್ಲಿ ಧರ್ಮವು ವಿಸ್ತರಿಸಬೇಕೆಂಬುದನ್ನು ಕನ್ನಡಿಗರಿಗೆ ತೋರಿಸಿಕೊಟ್ಟವ ನಮ್ಮ ಪಂಪ ಮಹಾಕವಿ ಎಂದು ತಿಮ್ಮಪ್ಪಯ್ಯನವರು ಅಭಿಮಾನದಿಂದ ನುಡಿದಿದ್ದಾರೆ. ಪಂಪ ತನ್ನ ಆದಿಪುರಾಣದಲ್ಲಿ

''ಇದುವೆ ಸುಕವಿ ಪ್ರಮೋದ
ಪ್ರದಮಿದವೆ ಸಮಸ್ತ ಭವ್ಯಲೋಕ ಪ್ರಮುದ
ಪ್ರದಮೆನೆ ನೆಗಳಾದಿಪುರಾ
ಣದೊಳಳೆವುರಿದು ಕಾವ್ಯಧರ್ಮಮಂ ಧರ್ಮಮುಮಂ''[೧೪]

ಎನ್ನುತ್ತಾನೆ. ಇಲ್ಲಿ ಧರ್ಮವೆಂದರೆ ಜೈನಧರ್ಮ. ತನ್ನ ಜೈನಧರ್ಮದ ಪ್ರಸಾರಕ್ಕೆ ಕಾವ್ಯಧರ್ಮದ ಅವಶ್ಯಕತೆಯನ್ನು ಕಂಡುಕೊಂಡ ಪಂಪ. ಒಂದು ಕಾವ್ಯದಲ್ಲಿ ಉಭಯಧರ್ಮಗಳನ್ನು ತರಲು ಅವುಗಳ ಸ್ವರೂಪ, ಸಾಮ್ಯತೆ ಮತ್ತು ಸಂಖ್ಯೆಗಳು ಅನುಕೂಲವಾದವು. ಅಂದರೆ ಜೈನಧರ್ಮವು ದಶಸಂಖ್ಯಾತವಾಗಿದೆ. ಕಾವ್ಯ ಧರ್ಮವೂ ದಶಸಾಹಿತ್ಯಕವಾಗಿದೆ. ಇಲ್ಲಿ ಪಂಪನು ಅವುಗಳನ್ನು ಒಂದಕ್ಕೊಂದು ಕೂಡಿ, ಇದು ಧರ್ಮ, ಇದು ಕಾವ್ಯಧರ್ಮ ಎಂದು ನಿರ್ಧರಿಸಲಿಲ್ಲ. ಬದಲಾಗಿ ದೋಷಗಳನ್ನು ತಡೆದು, ಸೌಂದರ್ಯವನ್ನು ಮಿರುಗಿಸಿ, ಸಮಾಜಯವನ್ನು ಬಾಳಿಸುವ, ಏಳಿಗೆ ತರುವ ಚೈತನ್ಯವನ್ನು ಕಾವ್ಯಧರ್ಮ ಎಂದು ಪರಿಗಣಿಸಿ, 'ಕಾವ್ಯಧರ್ಮವನ್ನು ಸಮಸ್ತಿಕರಿಸಿದ್ದಾರೆ.

''ಆದಿಪುರಾಣ ಆಗಮಿಕ ಕಾವ್ಯ 'ಸಮಸ್ಯಭಾರತ' ಲೌಕಿಕ ಕಾವ್ಯವಾದ್ದರಿಂದ ವಿದ್ವದ್ರಂಜಕವಾದ ಮಾರ್ಗಬದ್ಧವಾದರೆ ಸಾಲದ 'ಸಕಲಾವನೀ ತಳಜನ''[೧೫]ವು ಮೆಚ್ಚುವಂತಿರಬೇಕು. ಅತ್ತ ಗ್ರಾಮ್ಯವೂ ಆಗದೆ ಮನೋಹರವಾದ ದೇಶೀಯ ಪದ್ಧತಿಯಿಂದ, ಇತ್ತ ಕ್ಲಿಷ್ಟವಾಗದ ಕಾವ್ಯಮಾರ್ಗದ ಧರ್ಮದಿಂದ ಬರೆದುದಾಗಿರಬೇಕು. ಅದನ್ನು ಪಂಪ ಚೆನ್ನಾಗಿ ಈಕ್ಷಿಸಿದ್ದಾನೆ ಎಂದು ಗುರುತಿಸಿದ ತಿಮ್ಮಪ್ಪಯ್ಯನವರು ಮುಂದೆ

---

೧೪. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೧೮೭
೧೫. ಅದೇ ಪುಟ ೧೯೧

ಪಂಪನ ಬಗೆ ಪೊಸತಪ್ಪುದು, ಪ್ಯದುಬಂಧದೊಳೊಂದುವುದು, ದೇಸಿಯೊಳ್ ಪುಗುವುದು, ಪೊಕ್ಕಮಾರ್ಗದೊಳ್ ತಳ್ವದು ಎಂಬ ವಿಶಿಷ್ಟ ಪದಗುಚ್ಛಗಳನ್ನು ವಿಶ್ಲೇಷಿಸುತ್ತಾರೆ.

'ಆದಿಪುರಾಣ' ಆಗಮಿಕ ಕಾವ್ಯವಾದುದರಿಂದ ಆ ಧರ್ಮವೆಂದರೆ ಜೈನ ಧರ್ಮ. ಆದರೂ ಕಾವ್ಯ ಧರ್ಮದೊಡನೆ ಅದನ್ನು ಸರಳುಗೊಳಿಸಿ ಹೇಳುವುದರಿಂದ ಅದು ವಿಶ್ವಾಸ ಧರಣೀಯವಾಗಿದೆ. ಯಾರಿಗೆ ಆಗಲಿ ಆವರವರ ಮತವೇ ವಿಶ್ವಧರ್ಮ ಆಗಿರುತ್ತದೆ. ಈ ದಾರಿಯಲ್ಲಿ ಪಂಪನಿದ್ದರೂ ಅವನು ತನ್ನದು ಜೈನಧರ್ಮ ಎನ್ನದೆ 'ಧರ್ಮ' ಎಂದು ಮಾತ್ರ ಹೇಳಿದ್ದಾನೆ. ಈ ಧರ್ಮವನ್ನು ವಿವರಿಸುವ 'ಆದಿಪುರಾಣ'ದಲ್ಲಿ ಎಲ್ಲಿಯೂ ಜೈನಧರ್ಮ ವೆಂಬ ಸೂಚನೆ ಇಲ್ಲದಿರುವುದನ್ನು ತಿಮ್ಮಪ್ಪಯ್ಯನವರು ಗುರುತಿಸಿದ್ದಾರೆ. ನಾಸ್ತಿಕರೂ, ಆಧುನಿಕ ವಿಜ್ಞಾನವಾದಿ ವಿಚಾರವಂತರು ಒಪ್ಪುವ ದಯೆ,ದಮ,ದಾನ, ತಪ,ಶೀಲ ಇವುಗಳನ್ನು ಪಂಪ ಅನುಮೋಸಿದ್ದಾನೆ. ಒಟ್ಟನಲ್ಲಿ ''ಪಂಪ ಜೈನನಾದುದರಿಂದ ಸ್ವಮತ ಧರ್ಮಪ್ರವಾಹವನ್ನು ಅವನು ಆಗಮಿಕ ಮಾರ್ಗದಲ್ಲಿ ಹರಿಸಿದರೂ, ಎಲ್ಲಾ ಧರ್ಮಗಳಿಗೂ ಆಧಾರವಾದ ಈ ಪ್ರಪಂಚ ಧರ್ಮವೇ ಆ ಮಹಾಕವಿಯ ಹೃದಯದಿಂದ ಸುರಿದಿದೆ ಎಂಬುದು ಈ ಧರ್ಮಸ್ವರೂಪ ಕಥನದಿಂದ ಗೊತ್ತಾಗುತ್ತದೆ.[೧೬] ಎಂದು ತಿಮ್ಮಪ್ಪಯ್ಯನವರು ಅಭಿಪ್ರಾಯಿಸಿದ್ದಾರೆ.

ಪಂಪನ ದೇಸಿ

'ವಿಕ್ರಮಾರ್ಜುನ ವಿಜಯ'ದ ಬಗ್ಗೆ ಬಂದಿರುವ ನಿಘಂಟುವಿನ ಪರವಾಗಿ ಈ ಕೃತಿಯ ಸಂಪಾದಕರು ತಮ್ಮ ಉಪೋದ್ಘಾತದಲ್ಲಿ ಹೀಗೆನ್ನುತ್ತಾರೆ - ''ಅನೇಕ ಪದಗಳ ನಿಷ್ಕೃಷ್ಟವಾದ ಅರ್ಥವು ಇದೇ ಎಂದು ಹೇಳಲು ನಮಗೆ ಸಾಧ್ಯವಿಲ್ಲ. ವೇಶ್ಯಾ (ವಾಟ) ವಿಹಾರ ಮತ್ತು ಮೃಗಯಾವಿನೋದ ಸಂಬಂಧವಾದ ಪದಗಳಲ್ಲಿ ಕೆಲವಕ್ಕೆ ನಮಗೆ ಅರ್ಥವು ತಿಳಿಯದು''[೧೭] ಇದು ಸಂಪಾದಕರ ನ್ಯೂನತೆಯಲ್ಲ. ಇವರ ಈ ಮಾತು ಪಂಪನ ದೇಸಿಯ ಗಹನತೆಯನ್ನು ಸೂಚಿಸುತ್ತಿದೆ. ಇಷ್ಟೊಂದು ದುರ್ಘಟವಾದ ದೇಸಿಯನ್ನು ಒಂದಿಷ್ಟಾದರೂ ವಿವರಿಸಲಿಕ್ಕಾಗಿ ಲೇಖಕರು ಹೊರಟ್ಟಿದ್ದಾರೆ. ಸಂಪಾದಕ ಮಹನೀಯರ ಮನಸ್ಸಿಗೆ ಮಸುಕಾದ ದೇಸಿಗಳನ್ನೆಲ್ಲ ಹೊಸಯಿಸುವೆವೆಂದು ಭಾವಿಸಬಾರದು, ಬದಲಾಗಿ ಸಾಧ್ಯವಾದಷ್ಟು ಪ್ರಯತ್ನಿಸುತ್ತೇವೆ ಎಂದು ಲೇಖಕರಾದ ತಿಮ್ಮಪ್ಪಯ್ಯನವರು ವಿನಮ್ರವಾಗಿ ಪ್ರಾರ್ಥಿಸುತ್ತಾರೆ

ಪಂಪ ಬಳಸಿರುವ 'ತೆಗಲೆ, ಕಡಿತ, ಕಮ್ಮರಿ, ಪುಳಾಚು, ಕಳಿಂಚು, ಕೊಡಸಾರಿ, ಜೋಪೆ ಹೀಗೆ ಮುಂತಾದ ದೇಸಿ ಪದಗಳ ಅರ್ಥವನ್ನು ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ ನುಡಿಗಟ್ಟಿನ ದೇಸಿಯ

---

೧೬. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೦೫
೧೭. ಅದೇ ಪುಟ ೨೦೭

ಸ್ವಭಾವವನ್ನು ವಿವರಿಸಿ, ಅನೇಕ ನುಡಗಟ್ಟುಗಳ ಅರ್ಥ ಬಿಡಿಸಿದ್ದಾರೆ. ಇದರ ಜೊತೆ ಗಾದೆಗಳನ್ನು ಕೂಡ ಅರ್ಥವಿವೇಚಿಸಿದ್ದಾರೆ.

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಮೂರು ರಘಟಾಬಂಧಗಳು ಕ್ರಮವಾಗಿ ಪ್ರಥಮ, ತೃತೀಯ ಮತ್ತು ಚತುರ್ಥಾಶ್ವಾಸಗಳಲ್ಲಿ ಬರುತ್ತವೆ. ಮೊದಲಿನ ಎರಡಕ್ಕೆ 'ರಗಳೆ' ಎಂಬ ಹೆಸರಿದ್ದರೂ ಮೂರನೆಯದಕ್ಕೆ 'ಮಟ್ಟರಗಳೆ' ಎಂಬ ವಿಶೇಷವಾದ ಹೆಸರಿರುವುದನ್ನು ತಿಮ್ಮಪ್ಪಯ್ಯನವರು ಗುರುತಿಸುತ್ತಾರೆ.

'ವೇಶ್ಯಾವಾಟವಿಹಾರ' ವನ್ನು ಕವಿ ವಿಸ್ತಾರವಾಗಿ ಬಣ್ಣಿಸಿದ್ದಾನೆ. ಈ 'ವೇಶ್ಯಾವಾಟವಿಹಾರ' ವೆಂದರೆ ಆಧುನಿಕರಲ್ಲಿ ಕೆಲವರಿಗೆ ಅಸಹ್ಯವಾಗಿ ತೋರುವುದು ಎಂದು ಸಂದೇಹಿಸಿದ ತಿಮ್ಮಪ್ಪಯ್ಯನವನ್ನು ಅದನ್ನು ಜ್ಯೋತ್ಸ್ನಾ ವಿಹಾರ ಎಂದು ಹೆಸರಿಟ್ಟು ಕರೆಯುತ್ತಾರೆ. ಈ ವಿಹಾರದಲ್ಲಿ ತೋರುವ ಅಂಥ ಚದುರು ಅಲ್ಲವೆ ಸಂಸ್ಕೃತಿ ನೆಲೆವೆಡೆದ ಉತ್ತಮ ಗಣಿಕೆಯರಿಗೆ ಆಗಿನ ಸಮಾಜದಲ್ಲಿ ಉತ್ತಮ ಸ್ಥಾನವಿತ್ತೆಂದು ಸೂಚಿತವಾಗುತ್ತದೆ ಎಂದಿದ್ದಾರೆ. ಮೃಗೀಯ ವಿನೋದದೊಳಗಿನ ದೇಸಿಯ ಸ್ವರೂಪವನ್ನು ವಿವರಿಸಲು, ಬೇಟೆಯ ದೇಸಿಯ ನುಡಿಗಟ್ಟು ಮತ್ತು ನುಡಿಗಳನ್ನು ವಿವರಿಸುತ್ತಾರೆ. ಅನಂತರ ಬೇಟೆಯ ನಾಲ್ಕು ಪ್ರಭೇದಗಳಾದ ದೀವದ ಬೇಂಟೆ, ಪಂದಿಮೆಂಟೆ, ಕಿರುವೇಂಟೆ ಮತ್ತು ಪೆರ್ವೇಂಟಗಳನ್ನು ಹೆಸರಿಸಿ, ಅವುಗಳ ಬಗೆಗೆ ವಿವರವಾಗಿ ಚರ್ಚಿಸುತ್ತಾರೆ. ಇಲ್ಲಿ ಪಂಪನು ಬೇಟೆಯ ಹಲವು ದೇಸಿಗಳನ್ನು ಮಾರ್ಗವೆಡಿಯಿಸಿ ತನ್ನ ಉದ್ದೇಶವನ್ನು ಹೇಗೆ ಗೊನೆಗೊಳಿಸಿದ್ದಾನೆಂಬುದನ್ನು ಸಾಧ್ಯವಾದಷ್ಟು ವಿವರಿಸಿದ್ದಾರೆ. ಕೊನೆ ''ಉಣ್ಮೆ ಪೊಣ್ಮು ಮೀ ದೇಸಿಗಳನ್ನು ಬೆರೆಸಿ ಮಾರ್ಗಮಾ ಪೊಸಯಿ ಸದೆ ಉಂತೆ ನಾಡೊವಜನಾದನೊ ಪೇಚ್ ಕವಿತಾಗುಣಾರ್ಣವಂ''[೬] ಎಂದು ಹೇಳಿ ಈ ಲೇಖನವನ್ನು ಮುಗಿಸುತ್ತಾರೆ.

## ಐತಿಹಾಸಿಕ ದಿಗ್ದರ್ಶನ

ಈ ಲೇಖನದಲ್ಲಿ ಮುಳಿಯ ತಿಮ್ಮಪ್ಪಯ್ಯನವರು ಚಾಲುಕ್ಯರ ವಂಶದ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಕೊಡುತ್ತಾರೆ. ರಾಷ್ಟ್ರಕೂಟರ ಸಾಮಂತನಾಗಿದ್ದ ಜಯಸಿಂಹ ಕುಮಾರನು ಲಾಟರಾಜ್ಯದಿಂದ ಹೊರಬಂದು ಸ್ವತಂತ್ರ ರಾಜನಾದ ಸಂದರ್ಭದಿಂದ ಹಿಡಿದು ಅರಿಕೇಸರಿ ಮತ್ತು ಪಂಪನ ಒಡನಾಟ (ಮತ್ತು) ಹಾಗೂ 'ವಿಕ್ರಮಾರ್ಜುನ ವಿಜಯ' ವನ್ನು ಬರೆದವರೆಗಿನ ಇತಿಹಾಸವನ್ನು ಕಟ್ಟಿಕೊಡುತ್ತಾರೆ. ತನ್ನ ಆಶ್ರಯದಾತನ ಋಣವನ್ನು ತೀರಿಸಲು ಪಂಪನು ' ಈ ತರದಿತಿಹಾಸ ಕಥೆ' ಯನ್ನು ಮಹಾಕಾವ್ಯವನ್ನಾಗಿ ಬರೆದನು ಅಷ್ಟೇ ಅಲ್ಲ ಅದನ್ನು ತುಂಬಿದೊಡ್ಡೋಲಗದಲ್ಲಿ ಕವಿಯೇ ಹಾಡಿ ಒಪ್ಪಿಸಿದನು. ಇದನ್ನು ಕೇಳಿ ಅರಿಕೇಸರಿಯು ಸಂತುಷ್ಟನಾದನು. ಇಂಥ ''ಸಕಲಗುಣ ವಿಶಿಷ್ಟವಾದ ಈ ತೆರದ 'ಸಮಸ್ತಭಾರತ'ವನ್ನು ಹಿಂದಿನ

೬. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೬೧

ನರೇಂದ್ರರಾರೂ ಕೈಗೊಟ್ಟು ಬರೆಯುಲಿಲ್ಲ. ಹಿಂದಿನ ಕವೀಂದ್ರರೂ ಬರೆಯುಲಿಲ್ಲ. ಹೀಗೆ ಬರೆಯಿಸಿದವನೆಂದರೆ 'ಗುಣಾರ್ಣವ'ನಾದ ನಾನೇ ಎಂದು ಅರಿಕೇಸರಿಯನ್ನು, ಬರೆದವನೆಂದರೆ 'ಕವಿತಾ ಗುಣಾರ್ಣವ'ನಾದ 'ನೀನೇ' ಎಂದು ಪಂಪನನ್ನೂ 'ಸಕಲಾವನೀತಳಜನ'ವು ಒಕ್ಕೊರಳಾಗಿ ಹೊಗಳಿತು''[೧೯] ಎಂದು ಹೇಳಿ ಅದಕ್ಕನುಗುಣವಾದ ಪದ್ಯಗಳನ್ನು 'ವಿಕ್ರಮಾರ್ಜುನ ವಿಜಯ'ದಿಂದ ಆರಿಸಿ, ಉದಾಹರಿಸುತ್ತಾ ಈ ಲೇಖನವನ್ನು ಮುಗಿಸುವರು.

## ಪಂಪನ ಕಾವ್ಯಧರ್ಮಪ್ರವಹಣ ಸ್ವರೂಪ

ತಿಮ್ಮಪ್ಪಯ್ಯನವರು 'ಆದಿಪುರಾಣ'ವನ್ನು ಮೂರು ಭಾಗವಾಗಿ ವಿಂಗಡಿಸುತ್ತಾರೆ. ಮೊದಲನೆಯದು ನಾಯಕನ ಮಹಾಬಲಾದಿ ಪೂರ್ವಭವಗಳನ್ನು ಬಣ್ಣಿಸುವ ಮೊದಲಿನ ಆರು ಆಶ್ವಾಸಗಳು, ಎರಡನೆಯದು ಭರತನ ಹುಟ್ಟು ಮೊದಲ್ಗೊಂಡು ಕೇವಲ ಜ್ಞಾನೋತ್ಪತ್ತಿವರೆಗಿನ ವಿಶಿಷ್ಟ ಕಥಾಂಶಗಳನ್ನು ನಿರೂಪಿಸುವ ನಾಲ್ಕು ಆಶ್ವಾಸನೆಗಳು, ಪುರು ದೇವನ ಹೆಮ್ಮಗನಾದ ಭರತನ ದಿಗ್ವಿಜಯೇಚ್ಛೆ ಮೊದಲಾಗಿ ಅವನು ಕೇವಲಿಯಾಗಿ ಮೈದೊರೆವರೆಗಿನ ವಿಷಯಗಳನ್ನು ಚಿತ್ರಿಸುವ ಅಂಶವೇ ಮೂರನೆಯದು. ಪುರಾಣ ದೃಷ್ಟಿಯಿಂದ ಇದು ಕಾವ್ಯವಷ್ಟೆ, ಕಾವ್ಯದೃಷ್ಟಿಯಿಂದ ಬಹುನಾಯಕ ವಿಶಿಷ್ಟವಾಗಿರುವಿಕೆ ಎಂಬುದು ಕಾವ್ಯ ಧರ್ಮಾವಗಾಹನೆಗೆ ಒಂದು ಬಂದಣಿಕೆಯೇ ಸರಿ ಎಂದು ಕೆಲವರು ಆಕ್ಷೇಪಿಸುವರು. ಇಲ್ಲಿ ''ಕಥಾನಾಯಕಂ ಪುರದೇವಂ''[೨೦] ಎಂದು ಕವಿಯೇ ಹೇಳಿರುವುದರಿಂದ ನಾನಾ ನಾಯಕತ್ವವನ್ನಾರೋಪಿಸುವುದಕ್ಕೆ ಅವಕಾಶವಿಲ್ಲ. ಮುಂದೆ ಲೇಖಕರು ತಾವು ವಿಂಗಡಿಸಿದ 'ಆದಿಪುರಾಣ'ದ ಮೂರು ಭಾಗಗಳನ್ನು ವಿವರಿಸಿ ಅವುಗಳ ಔಚಿತ್ಯವನ್ನು ಚರ್ಚಿಸುತ್ತಾರೆ.



## 'ಆದಿಪುರಾಣ'ದ ರಸಪ್ರವಾಹ

ಈ ಲೇಖನದಲ್ಲಿ ತಿಮ್ಮಪ್ಪಯ್ಯನವರು 'ಆದಿಪುರಾಣ'ದ ಕಥಾ ಸಾರವನ್ನು ವಿವರಿಸುತ್ತಲೇ ರಸದ ವಿವೇಚನೆಗೆ ತೊಡಗಿದ್ದಾರೆ. ಪುರದೇವನ ಆದಿ ಜನ್ಮದಿಂದ ಹಿಡಿದು, ಲಲಿತಾಂಗ - ಸ್ವಯಾಪ್ರಭೆಯರ ದಾಂಪತ್ಯ ಜೀವನ, ಶ್ರೀಮತಿ ವಜ್ರಜಂಘರ ಪ್ರಣಯ, ಭರತನ ಗರ್ವರಸ ಸೋರಿದ ಸಂದರ್ಭವನ್ನು ವಿಶ್ಲೇಷಿಸುತ್ತಾರೆ. ಇಲ್ಲೆಲ್ಲ ತಿಮ್ಮಪ್ಪಯ್ಯನವರು 'ಆದಿಪುರಾಣ'ದ ಪದ್ಯಗಳನ್ನು ಉಲ್ಲೇಖಿಸುತ್ತಾ ರಸ ವಿವೇಚನೆಯನ್ನು ಕೈಗೊಳ್ಳುತ್ತಾರೆ.

ರಸವನ್ನು ಸಿದ್ಧಿಗೊಳಿಸುವುದೆಂದರೆ ಅಷ್ಟೊಂದು ಸುಲಭಸಾಧ್ಯವಲ್ಲ. ಅದೊಂದು ತಪಸ್ಸಿದ್ಧಿಯಿಂದಲೇ ರಸದ ಸಾಮಿಪ್ಯವನ್ನೊಂದಬೇಕು. ಕಾವ್ಯತಪಸ್ಸಿದ್ಧಿ ಎಂದರೆ ಜ್ಞಾನೋತ್ಪತ್ತ್ಯವಸ್ಥೆಯು ಕಾವ್ಯ ಸಮಾಧಿಯಿಂದ

---

೧೯. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೮೦
೨೦. ಅದೇ ಪುಟ ೩೦೩

ತತ್ಸಾರೂಪ್ಯಗೊಂಡ ಮೇಲೆ, ಆ ರಸದೊಡನೆ ಸಾಮ್ರಾಜ್ಯವಾಗುವುದು ಅದೇ ರಸ ಸಿದ್ಧಿ. ಲಕ್ಷಣವಿಡಿದು ಹೇಳುವುದಾದರೆ, ಹಾಗೆ ಸಿದ್ಧವಾದ ರಸವೇ 'ಅಲೌಕಿಕ ರಸ' ಎಂಬುದು, ಲಾಕ್ಷಣಿಕರು ಒಪ್ಪಿದಂತೆ, ಉತ್ತಮ ಕಾವ್ಯವು ಸೂಸುತ್ತಿರುವ ಧಾರ್ಮಿಕ ಶೃಂಗಾರಾದಿ ರಸಗಳೊಳಗೆ ಮೂರು ವಿಭಾಗಗಳನ್ನು ಮಾಡುತ್ತಾರೆ. ಅವು ಲೌಕಿಕರಸ, ಲೌಕಿಕಾಲೌಕಿಕರಸ ಅಥವಾ ಅಲೌಕಿಕರಸದ ಪೂರ್ವಾವಸ್ಥೆ ಮತ್ತು ಅಲೌಕಿಕರಸ ಅಥವಾ ಸಿದ್ಧರಸ ಕಥಾಭಾಗವನ್ನು ವಿಶ್ಲೇಷಿಸುತ್ತಾ ಈ ಮೂರು ರಸಗಳನ್ನು ಅರ್ಥೈಸುತ್ತಾರೆ.

ರಸೋದಯವೆಲ್ಲ ? ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸುತ್ತಾರೆ, ರಸೋತ್ಪತ್ತಿ ನಟನಲ್ಲಿಯೋ, ನೋಟಕನಲ್ಲಿಯೋ ಅಥವಾ ಕವಿಯಲ್ಲಿಯೋ, ವಾಚಕನಲ್ಲಿಯೋ ಎಂಬ ವಾದಕ್ಕೆ ಉತ್ತರ ಎನ್ನುವಂತೆ ''ಉತ್ತಮ ನಟ-ಕವಿಗಳೆದೆಯಲ್ಲಿ ಪೂರ್ವ ವಾಙ್ಮಯದೊಳಗಡಕವಾದ ಅಲೌಕಿಕರಸದ ಆವೇಶವಾಗಿರುತ್ತದೆ. ಆ ರಸವು ಅವರ ಲೌಕಿಕಾಲೌಕಿಕ ರೂಪದ ಪ್ರಭೆಯನ್ನು ಹುರಿದುಂಬಿಸಿತು. ಅದರ ಪರಿಣತಿಯೇ ಅವರ ನಟನ = ಕಾವ್ಯಗಳು, ಅವುಗಳಿಂದಾಗಿ ಅವರವರ ಯೋಗ್ಯತಾನುಸಾರವಾದ ರಸೋತ್ಪತ್ತಿ ನೋಟಕರಲ್ಲಿ ಮತ್ತು ಸಹೃದಯ ವಾಚಕರಲ್ಲಿ ತಲೆದೋರುವುದು''[೨೧] ಎಂದು ಅಭಿಪ್ರಾಯಪಡುತ್ತಾರೆ.

## 'ಸಮಸ್ತಭಾರತ'ದ ಶೈಲಿ

ಪಂಚಭೂತಗಳಲ್ಲಿ ಜಲ ಮತ್ತು ಪೃಥ್ವಿಯನ್ನುಳಿದು ಉಳಿದವುಗಳನ್ನು ಬೇರೆ ಬೇರೆಯಾಗಿ ತೋರಿಸಲು ಸಾಧ್ಯವಿಲ್ಲ. ಈಗಿನ ವಿಜ್ಞಾನಶಾಸ್ತ್ರನಿಪುಣರು ಯಂತ್ರಾದಿ ಸಹಾಯಗಳಿಂದ ಎಲ್ಲವನ್ನು ವಿಂಗಡಿಸಿ ತೋರಿಸಲು ಪ್ರಯತ್ನಿಸುತ್ತಿರುವರು. ಇವರ ಈ ಪ್ರಯತ್ನ ಫಲವಾಗಿ ಐದರೊಳಗೆ ಎಷ್ಟೆಷ್ಟೋ ಭೇದವಾಗಿ, ಪ್ರಸಿದ್ಧವಾದ ಪೃಥ್ವಿವೀತ್ವಾದಿ ತತ್ತ್ವ ಸ್ವರೂಪಗಳೂ ಮಾಸಿ ಹೋಗಬಹುದು. ಇದರಂತೆ ಈ ಮೊದಲು ಶೈಲಿಯಲ್ಲಿ ವಿಮರ್ಶಿಸಿದಾಗ ಶೈಲಿಯ ಸ್ವರೂಪವೂ ಅಲ್ಲಲ್ಲಿ ಹೊಳೆದಿರಬಹುದು. ಮುಂದೆ ಶೈಲಿಯನ್ನು ವಿಮರ್ಶಿಸುವಾಗ ರಸದ ಒರತೆ ಕಾಣಬಹುದು. ಗುಣಾಲಂಕಾರಾದಿಗಳನ್ನು ಅಲಂಕಾರಿಕರು ಲಕ್ಷಿಸುವಾಗ ರಸಶೈಲಿಗಳೆರಡೂ ಒಂದಾಗಿ ತೋರುವುದರಿಂದ, ಇವೆರಡನ್ನು ಭೇದಿಸಲು ಕಷ್ಟವಾಗುತ್ತದೆ. ಒಂದನ್ನುಳಿದು ಇನ್ನೊಂದನ್ನು ತೋರಿಸಲು ಸಾಧ್ಯವಿಲ್ಲ. ಹಿಂದಿನ ಲೇಖನದಲ್ಲಿ ರಸವನ್ನು ಪ್ರಧಾನವಾಗಿ ಗುರಿಯಾಗಿಟ್ಟು ಕೊಂಡಿದ್ದಾರೆ. ಆದುದರಿಂದ ಈ 'ಸಮಸ್ತಭಾರತ' ದೊಳಗೆ ರಸಭಾವಾದಿಗಳು ಅಷ್ಟ ಅಚ್ಚುಕಟ್ಟಾಗಿಲ್ಲ ಎಂದು ತಿಳಿಯದೆ, ವಾಚಕರು ತಾವಾಗಿಯೇ ಅದನ್ನು ಪರಿಶೀಲಿಸಿಕೊಳ್ಳಬೇಕೆಂದು ಸಲಹೆಯನ್ನು ಕೊಡುತ್ತಾ ಶೈಲಿಯ ವಿಷಯಕ್ಕೆ ಹೋಗುತ್ತಾರೆ.

'ಸಮಸ್ತ ಭಾರತ'ದಲ್ಲಿ ಪ್ರಮುಖ ನಾಯಕನೆಂದರೆ ಅರ್ಜುನ ವಸ್ತು ಸಂದರ್ಭಕ್ಕನುಗುಣವಾಗಿ ಇಲ್ಲಿ

---

೨೧. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೨೪೪

ಬಹುಮಂದಿ ನಾಯಕರು ಬರುತ್ತಾರೆ. ಆದರೂ ಕವಿ ಎಂಟು ಮಂದಿಯ ಹೆಸರನ್ನು ಹೇಳುತ್ತಾನೆ. ಈ ಭಾರತ ಲೋಕ ಪೂಜ್ಯವಾದುದು ಆ ಎಣ್ಬರಿಂದಲೇ ಎಂಬುದು ಪಂಪನ ಅಭಿಪ್ರಾಯವಾಗಿರಬೇಕು''[೨೨] ಅವನು ಕೊಡುವ ನಾಯಕರೆಂದರೆ - ವಿಕ್ರಮಾರ್ಜುನ, ಭೀಮ, ಧರ್ಮಪುತ್ರ, ಪ್ರತಿನಾಯಕರು - ಕರ್ಣ, ದುರ್ಯೋಧನ ಮತ್ತು ಉಭಯಪ್ರಿಯನಾಯಕರು ದ್ರೋಣ, ಭೀಷ್ಮ, ಶಿಲ್ಯ, ಪಂಪ ತನ್ನ ಕಾವ್ಯದ ಅಂತ್ಯದಲ್ಲಿ ಈ ನಾಯಕರನ್ನು ಅವರವರ ಶೀಲ ಮಾಲಕವಾಗಿಯೇ ನಿರ್ದೇಶಿಸುತ್ತಾನೆ.

''ಚಲದೊಳ್ ದುರ್ಯೋಧನಂ ನನ್ನಯೊಳಿನತನಯಂ ಗಂಡಿನೊಳ್ ಭೀಮಸೇನಂ
ಬಲದೊಳ್ ಮದ್ರೇಶ ನತ್ಯುನ್ನತಿಯೊಳಮರ ಸಿಂಧೂದ್ಭವಂ
ಚಾಪವಿದ್ಯಾ ಬಲದೊಳ್ ಕುಂಬೋದ್ಭವಂ ಸಾಹಸದ ಮರಿಮೆಯೊಳ್ ಪಲ್ಗುಣಂ ಧರ್ಮದೊಳ್ ನಿ
ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ''[೨೩] ಹೀಗೆ ಹೇಳುವಲ್ಲಿ ಇದು ಶೈಲಿಪ್ರಧಾನ ಪ್ರಬಂಧವೆಂಬ ಅಭಿಪ್ರಾಯ ಪಂಪನಿಗಿದ್ದಿರಬಹುದುದೆಂದು. ತಿಮ್ಮಪ್ಪಯ್ಯನವರು ಊಹಿಸುತ್ತಾರೆ. ಚಿತ್ರಕಾರನ ಶೀಲವು ಆಕೃತಿರೇಖಾಮಾರ್ಗವಾಗಿ ಜೀವಕಳಾರೇಖೆಯಲ್ಲಿ ಸುತ್ತಿಸುಳಿದು ಮಿರುಗಿ ಮಿಂಚುವಂತೆ, ಕವಿಶೀಲವೇ ನಾಯಕ ಶೀಲದೊಡನೆ ಅಭಿನ್ನವಾಗಿ ಕಾವ್ಯದಲ್ಲಿ ಮಿನುಗುತ್ತದೆ. ಗುಣ, ಅಲಂಕಾರ, ಭಾವ ರಸಾದಿಗಳ ಅಚ್ಚುಕಟ್ಟುಗಳಿಂದ ಹಾಸಹೊಕ್ಕದ ಶೈಲಿಯಿಂದಲೇ ಕಾವ್ಯವು ಆದ್ಯಂತವಾಗಿ ಒಪ್ಪಂಬೂಸಿದಂತೆ ಮಿರುಮಿರುಗುವುದು ಎಂದು ತಿಮ್ಮಪ್ಪಯ್ಯನವರು ಅಭಿಪ್ರಾಯಪಡುತ್ತಾರೆ.

ನಾಯಕರ ಶೀಲಕ್ಕೂ, ಕವಿಯ ಶೈಲಿಗೂ ಸಂಬಂಧವೇನೆಂದು ಕೇಳಬಹುದು. 'ದಯೆ', 'ದಮಂ', 'ದಾನಂ', 'ತಪಂ' ಇವು ಪ್ರಪಂಚದ ಸುತ್ತಲೂ ಹರಿಯುವ ಧರ್ಮಸಾರಕ್ಕೆ ಆಶ್ರಯವಾದ ಪಂಚಮಾಂಗವೇ ಶೀಲವಾಗಿದೆ. ಉತ್ತಮ ಕವಿಯ ಶೀಲವು ನಾಯಕಾದಿ ಶೀಲಗಳೊಡನೆ ತನ್ಮಯವಾದರೆ, ಕಾವ್ಯವು ಕಳಾಮಯ ಎನಿಸುತ್ತದೆ. ಕಾವ್ಯವಾಗಿ ರೂಪಪಡೆದು ಭಾವರಸಾಲಂಕಾರಾದಿ ಸಾಧನೆಗಳಿಂದೊಡವರೆದು ಸೂಸುವ ಕವಿಪ್ರತಿಭಾ ವೈಖರಿಯನ್ನೆ ಶೈಲಿ ಎನ್ನುವರು. ಶಬ್ದಾರ್ಥ ಭಾವನಾದಿಗಳಲ್ಲಿ ಮಾತ್ರ ಸಂಬಂಧ್ದವಾದ ರೀತಿ, ಗುಣ, ರಸಾದಿಗಳೆಲ್ಲವೂ ಶೈಲಿಯ ನೂಲಿನಲ್ಲೇ ಸುರಿಯಲ್ಪಟ್ಟಿರುತ್ತೆವೆ. ಈ ಶೈಲಿಯನ್ನು ಆಯಾ ವಿಶಿಷ್ಟನಾಯಕರ ಶೀಲಗಳೆಂಬ ಕುಪ್ಪಿಗೆಗಳಲ್ಲಿಟ್ಟು ತೋರಿಸಲು ಪ್ರಯತ್ನಿಸುತ್ತಾರೆ. ಅಂದರೆ ಪ್ರತಿಯೊಬ್ಬ ನಾಯಕನ ಗುಣ, ಸ್ವಭಾವ, ಶೀಲಗಳನ್ನು ಆಯಾ ನಾಯಕನಿಗೆ ಆರೋಪಿಸಿರುವ ಶೀಲಗಳ ಶೀರ್ಷಿಕೆಯ ಅಡಿಗಳಲ್ಲೇ ವಿವೇಚಿಸುವುದರ ಮೂಲಕ ಪಂಪನ 'ಸಮಸ್ತಭಾರತ'ದ ಶೈಲಿಯನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ.

---

೨೨. ಮುಳಿಯ ತಿಮ್ಮಪ್ಪಯ್ಯ : ನಾಡೋಜಪಂಪ, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬, ಪುಟ ೩೬೪
೨೩. ಅದೇ ಪುಟ ೧೪೩

ಮುಳಿಯ ತಿಮ್ಮಪ್ಪಯ್ಯನವರ ಈ ರೀತಿ ಶೈಲಿಯನ್ನು ವಿವರಿಸ ಹೊರಟಿರುವುದು ಮೆಚ್ಚುಗೆಯ ಕೆಲಸವಾಗಿದೆ. ಏಕೆಂದರೆ ಶೀರ್ಷಿಕೆಯ ಅಡಿಯಲ್ಲಿ ಆಯಾ ಪಾತ್ರಗಳ ಸಂಪೂರ್ಣ ಪರಿಚಯ ಮಾಡಿದ್ದಾರೆ. 'ಸಮಸ್ತ ಭಾರತ'ದ ನೋಟ ಕೊಡುವ ಜೊತೆಯಲ್ಲಿ ಯಾವ ಯಾವ ಪಾತ್ರಗಳಲ್ಲಿ ಪಂಪನ ಕೈ ಹೇಗೆ ಕೆಲಸ ಮಾಡಿದೆನೆಂಬುದನ್ನು ತಿಳಿದುಕೊಳ್ಳಲು ಮುಳಿಯ ತಿಮ್ಮಪ್ಪಯ್ಯನವರ ಈ ಕ್ರಮ ಉಪಯುಕ್ತವಾಗಿದೆ.

## ಕಾವ್ಯಸಮೀಕ್ಷೆ

ತಿ.ನಂ. ಶ್ರೀಯವರ 'ಕಾವ್ಯ ಸಮೀಕ್ಷೆ' ಯಲ್ಲಿರುವ ಐದು ಪ್ರಬಂಧಗಳಲ್ಲಿ ಮೊದಲ ಮೂರು ಮತ್ತು ಐದನೆಯ ಪ್ರಬಂಧಗಳ 'ಪ್ರಬುದ್ಧ ಕರ್ನಾಟಕ'ದಲ್ಲಿ ಪ್ರಕಟಿಸಿದ ಲೇಖನಗಳಾಗಿವೆ. ನಾಲ್ಕನೆಯದು ಮೈಸೂರು ಮಹಾರಾಜರವರ ಕಾಲೇಜಿನ ಕರ್ನಾಟಕ ಸಂಘದ ಪ್ರಕಟನೆಯಾದ 'ಕುಮಾರವ್ಯಾಸ ಪ್ರಶಸ್ತಿ'ಗೆ ಸೇರಿವೆ.

### ಕಾಳಿದಾಸನ ನಾಟಕಗಳಲ್ಲಿ ದುರಂತ ವಸ್ತು ವಿನ್ಯಾಸ

ಸುಮಾರು ಇಪ್ಪತ್ತೈದು ಶತಮಾನಗಳ ಹಿಂದೆ ಗ್ರೀಕ್ ದೇಶದಲ್ಲಿ ದುರಂತ ನಾಟಕವು ಜನಸಿ, ಪ್ರಪಂಚಾದ್ಯಂತ ಅಪಾರ ಯಶಸ್ಸು ದೊರೆಯಿತು. ಆದರೆ ನಮ್ಮ ಭಾರತೀಯ ಸಂದರ್ಭದಲ್ಲಿ, ಸಂಸ್ಕೃತ ನಾಟಕಗಳಲ್ಲಿ 'ದುರಂತ' ವೆಂಬ ಪರಿಕಲ್ಪನೆಯೇ ಇಲ್ಲ. ಕಥೆಯಲ್ಲಿ ದುರಂತವಿದ್ದರೂ, ಅದರ ಕೊನೆಯಲ್ಲಿ ಮಂಗಳ ಹಾಡುವುದು ನಮ್ಮವರ ವೈಶಿಷ್ಟ್ಯವಾಗಿದೆ. ಈ ಆಕ್ಷೇಪಣೆಗೆ ಕಾಳಿದಾಸನೂ ಹೊರತಲ್ಲ. ಏಕೆಂದರೆ ಕಾಳಿದಾಸನ 'ವಿಕ್ರಮೋರ್ವಶೀಯ' ಮತ್ತು 'ಅಭಿಜ್ಞಾನ ಶಾಕುಂತಲ' ನಾಟಕಗಳ ಮೂಲಕಥೆಗಳು ದುರುಂತವಾಗಿದ್ದು, ಕಾಳಿದಾಸ ಅದನ್ನು ಮಂಗಳಕರವಾಗಿ ಮುಗಿಸಿರುವುದನ್ನು ತಿ.ನಂ. ಶ್ರೀಯವರು ಈ ಪ್ರಬಂಧದಲ್ಲಿ ವಿವೇಚಿಸಿದ್ದಾರೆ.

ತಿ.ನಂ. ಶ್ರೀಯವರು ಊರ್ವಶಿ ಪುರೂರವನ ಪ್ರಣಯಪ್ರಸಂಗದ ಕಥೆ ಎಲ್ಲೆಲ್ಲಿ ಬರುತ್ತದೆ ಎಂಬುದನ್ನು ದಾಖಲಿಸಿ, ಅನಂತರ ವಿಮರ್ಶೆಗೆ ತೊಡುತ್ತಾರೆ. ಅವರು ಸೂಚಿಸಿರುವ ಪ್ರಕಾರ ಕಥೆ ಮೊದಲು ಕಾಣುವುದು 'ಋಗ್ವೇದ'ದಲ್ಲಿ. ಇಲ್ಲಿ ಕಥೆ ಹೇಯೆಂದರೆ 'ಊರ್ವಶಿ ಒಬ್ಬ ಅಪ್ಸರೆ, ಪುರೂರವ ಚಂದ್ರವಂಶದ ದೊರೆ. ಅವನನ್ನುವರಿಸಲು ಊರ್ವಶಿ ನಿಬಂಧನೆ ಹಾಕುತ್ತಾಳೆ. ಮುಂದೆ ಆ ನಿಬಂಧನೆಯನ್ನು ಉಲ್ಲಂಘಿಸಿದಾಗ, ಊರ್ವಶಿ ದೇವಲೋಕಕ್ಕೆ ಹೊರಡುತ್ತಾಳೆ. ಮುಂದೊಂದು ದಿನ ಊರ್ವಶಿಯನ್ನು ಪುರವ ಭೇಟಿಯಾಗಿ ಅಂಗಲಾಚಿ ಬೇಡಿದರೂ ಊರ್ವಶಿ ಅವನೊಂದಿಗೆ ಹೋಗಲು ಒಪ್ಪುವುದಿಲ್ಲ'. ಇದು ವೈದಿಕ ಯುಗದ ಕಥೆ ಇನ್ನು 'ಶತಪಥಿ ಬ್ರಾಹ್ಮಣ'ದಲ್ಲಿ ಮತ್ತು 'ವಿಷ್ಣುಪುರಾಣ'ಗಳಲ್ಲೂ ಈ ಕಥೆ ಇದ್ದರೂ ವಿಭಿನ್ನವಾಗಿದೆ. ಲೇಖಕರು ಕಾಳಿದಾಸನ ಕಥೆಯೊಂದಿಗೆ ವೈದಿಕ ಕಥೆಯನ್ನು ಮಾತ್ರ ಹೋಲಿಸಿ ವಿಶ್ಲೇಷಿಸುವುದರಿಂದ ವೈಧಿಕ ಕಥೆಯನ್ನು ಮಾತ್ರ ಹೇಳಿ, ಉಳಿದೆರಡು ಕಥೆಗಳನ್ನು ಕೈಬಿಟ್ಟಿದ್ದೇನೆ.

ಕಾಳಿದಾಸನು ಕೊಡುವ ಊರ್ವಶಿ - ಪುರೂರವನ ಕಥೆ ಮೇಲಿನ ಮೂರು ಕಥೆಗಳಿಗಿಂತ ಭಿನ್ನವಾಗಿದೆ. ಪೂರೂರವನಿಗೆ ಮೊದಲೇ ಮದುವೆಯಾಗಿರುತ್ತದೆ. ಅವನನ್ನು ಕೈಹಿಡಿದ ಊರ್ವಶಿ ಹುಟ್ಟಿದ ಮಗುವನ್ನು ಗಂಡನಿಂದ ದೂರಮಾಡುತ್ತಾಳೆ. ಕೊನೆಯಲ್ಲಿ ದೇವಲೋಕಕ್ಕೆ ಊರ್ವಶಿಯು ಹೋಗುತ್ತಾಳೆ. ಆದರೆ ಇಂದ್ರನು, ಪುರೂರವನಿಂದ ಸಹಾಯವನ್ನು ಪಡೆಯಲು ಊರ್ವಶಿಯನ್ನು ಮತ್ತೆ ಪುರೂರವನಿಗೆ ಒಪ್ಪಿಸುತ್ತಾನೆ. ಹೀಗೆ ಕಾಳಿದಾಸ ಕಥೆಯನ್ನು ಮಂಗಳಕರವಾಗಿ ಮುಗಿಸಿದ್ದಾನೆ.

ವೈದಿಕ ಕಥೆಯಲ್ಲಿ ಊರ್ವಶಿ ತನ್ನ ಒಂದು ದಿನದ ಲೀಲೆಗಾಗಿ, ಕ್ರೀಡೆಗಾಗಿ ಪುರೂರವನನ್ನು ಕಾಮಿಸಿದಳು. ನಿಬಂಧನೆ ಮುರಿದ ಮೇಲೆ, ತನ್ನ ಪ್ರಣಯವನ್ನೂ ಮುರಿದಳು. ಅಲ್ಲದೆ ಪುರೂರವನ ಹಿರಿಯ ಹೆಂಡತಿಯ ಪ್ರಸ್ತಾಪ ಬರುವುದಿಲ್ಲ. ಆದರೆ ಕಾಳಿದಾಸ ಕಥೆಯ ಕಟ್ಟಡವನ್ನ ವ್ಯತ್ಯಾಸಪಡಿಸಿದ್ದಾನೆ. ಇಲ್ಲಿನ ಊರ್ವಶಿ ಹಳೆಯ ಕಥೆಯಂತೆ ಅಮಾನುಷಿಯಾದರೂ, ಮಾನವ ಸದೃಶಿಯಾದವಳು. ದಿಟ್ಟತನದಿಂದ ತಾನೇ ಪುರೂರವನನ್ನು ಹುಡುಕಿಕೊಂಡು ಮುಂದುವರಿದು ಬರುವಳು. ಅವಳಿಗೂ ಕುಲಕನ್ಯೆಯರಿಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಈ ಪಕ್ಷಕ್ಕೆ '' ಕಥಾನಾಯಕಿ ಒಬ್ಬ ದೇವಗಣಿಕೆಯೇಕಾಗಬೇಕು ?''[೧] ಎಂದು ಲೇಖಕರು ಖಾರವಾಗಿ ನುಡಿದಿದ್ದಾರೆ. ಪುರೂರವನಿಗಾಗಿ ಹೆತ್ತ ಮಗುವನ್ನೇ ಬಚ್ಚಿಟ್ಟ ಅವಳು ಮಾತೃ ಧರ್ಮವನ್ನು ಮರೆತಳು. ಊರ್ವಶಿ ಇನ್ನೇನು ಹೊರಡಬೇಕೆನ್ನುವಾಗ ಅನಿರೀಕ್ಷಿತವಾಗಿ ಬಂದ ನಾರದನ ಮೂಲಕ ಕಥೆಗೆ ಮಂಗಳವನ್ನು ಹಾಡಿಸಿ ಮೂಲದ ದುರಂತಭಾವವನ್ನು ಕಾಳಿದಾಸ ಕಣ್ಮರೆ ಮಾಡಿದ್ದಾನೆ. ಈ ಕೃತಿಯನ್ನು ಕುರಿತು ಪಾಶ್ಚಾತ್ಯ ವಿಮರ್ಶಕರೊಬ್ಬರು ಹೇಳಿದ ''ಉಜ್ವಲವಾದ ದುರಂತ ಕಥೆಯೊಂದನ್ನು ಕೆಡಿಸಿ, ಕ್ಷುದ್ರವಾದ ಕುಟುಂಬ ತಂತ್ರಗಳ ಬಳಕೆಯ ವೃತ್ತಾಂತವೊಂದನ್ನು ಬಳಿಸಿದನು. ಸ್ವರ್ಗದ ಅಪ್ಸರೆಯನ್ನು ತಂದು ನಾಡಾಡಿಯ ರಾಣಿವಾಸದವಳನ್ನಾಗಿ ಪರಿವರ್ತಿಸಿದನು''[೨] ಎಂಬ ಹೇಳಿಕೆಯನ್ನು ಲೇಖಕರು ಕೊಡುತ್ತಾರೆ. ಕೃತಿಗಳನ್ನು ಅಭ್ಯಾಸ ಮಾಡಿದವರಿಗೆ ಈ ಮಾತು ಸುಳ್ಳೆನಿಸದು.

ವಿಕ್ರಮೋರ್ವಶೀಯ ದಲ್ಲಿ ಕಾಳಿದಾಸನು ದುರಂತವಾಗಬೇಕಿದ್ದ ಕಥೆಯನ್ನು ಮಂಗಳ ಕಡೆಗೆ ತಿರುಗಿಸಿದನು. ಶಾಕುಂತಲ ನಾಟಕದಲ್ಲೂ ಪ್ರಣಯವಿದೆ. ಕಠೋರವಿರಹವಿದೆ, ಅಂತ್ಯದಲ್ಲಿ ಪುನಸ್ಸಮಾಗಮವಿದೆ. ಈ ನಾಟಕ ವಸ್ತುವನ್ನು ಕೊಂಡಾಡದ ವಿಮರ್ಶಕರಿಲ್ಲ. ಆದರೆ ಇದರ ಪರ್ಯಾವಸಾನವು ಉಚಿತವಾದುದೆ ? ಎಂಬ ವಿಚಾರ ಎಲ್ಲರಲ್ಲಿಯೂ ಮೂಡುತ್ತದೆ. ಘೋರ ಅಪಮಾನಕ್ಕೊಳಗಾದ ಶಕುಂತಲೆಯು ಮತ್ತೆ ದುಷ್ಯಂತನನ್ನು ಸ್ವೀಕರಿಸಿದುದು ಸಮರ್ಪಕವೇ ? ನಾಟಕದ ಲಕ್ಷಣಕ್ಕೆ ಕಟ್ಟುಬಿದ್ದ ಕಾಳಿದಾಸ ಮತ್ತೆ ದುರಂತವಾಗಬೇಕಿದ್ದ ಕಥೆಯನ್ನು ಮಂಗಳದಲ್ಲಿ ಮುಕ್ತಾಯ ಮಾಡಿರುವನೆ ? ಎಂಬೆಲ್ಲಾ ಪ್ರಶ್ನೆಗಳನ್ನು ಲೇಖಕರು ನಮ್ಮ ಮುಂದೆ ಹಾಕುತ್ತಾರೆ.

---

೧. ತಿ.ನಂ.ಶ್ರೀ : ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೧೯

೨. ಅದೇ ಪುಟ ೧೯

ಮಹಾಭಾರತದ ಶಾಕುಂತಲೋಪಾಖ್ಯಾನದಲ್ಲಿ ಬಂದಿರುವ ಕಥೆಯನ್ನು ಹೇಳಿ, ಅನಂತರ ಆ ಕಥೆಯನ್ನು ಕಾಳಿದಾಸ ಹೀಗೆ ಮಾರ್ಪಡಿಸಿದ್ದಾನೆ ಎಂಬುದನ್ನು ವಿವೇಚಿಸುತ್ತಾರೆ. ಮೂಲದಲ್ಲಿ ದುಷ್ಯಂತನು ಶಾಕುಂತಲೆಯನ್ನು ಉದ್ದೇಶಪೂರ್ವಕವಾಗಿ ಮರೆಯುತ್ತಾನೆ. ಅನೇಕ ವರ್ಷಗಳು ಕಳೆದ ಮೇಲೆ ದುಷ್ಯಂತನಿಗೆ ತನ್ನ ರಮನೆಗೆ ಬಂದ ಶಕುಂತಲೆಯ ಗುರುತು ಸಿಕ್ಕರೂ, ಸಿಗದವನಂತೆ ನಟಿಸುತ್ತಾನೆ. ಕೊನೆಗೆ ಅಶರೀರವಾಣಿ ಮಾತುಕೇಳಿ ಹೆಂಡತಿ ಮಗವನ್ನು ಸ್ವೀಕರಿಸುತ್ತಾನೆ. ಕಾಳಿದಾಸ ಶಾಕುಂತಲಾ ನಾಟಕವನ್ನು ಓದಿದಾಗ, ''ಶಕುಂತಲೆ, ದುಷ್ಯಂತ ಎಂಬ ಹೆಸರುಗಳು ಮಾತ್ರ ಮೂಲಕಥೆಗೂ ಕಾಳಿದಾಸನ ನಾಟಕಕ್ಕೂ ಸಮಾನವೇ ಹೊರತು ವಿವರಗಳಿಲ್ಲ ಒಂದಕ್ಕೊಂದಕ್ಕೆ ಹೋಲಿಕೆಯೇ ಇಲ್ಲ''[೩] ಎಂಬುದನ್ನು ಲೇಖಕರು ಗುರುತಿಸುತ್ತಾರೆ. ಪಾಶ್ಚಾತ್ಯರು ಈ ಶಾಕುಂತಲ ನಾಟಕವನು ಬರೆದಿದ್ದರೆ, ಬೆಸ್ತನ ಕೈಯಲ್ಲಿ ಉಂಗುರವನ್ನು ನೋಡಿದ ದುಷ್ಯಂತನು ಪಶ್ಚಾತಾಪ ಪಡುವುದರಲ್ಲಿಯೇ ಕಥೆಯನ್ನು ಮುಗಿಸುತ್ತಿದ್ದರು. ಏಕೆಂದರೆ ಶಾಕುಂತಲ ನಾಟಕದ ಆರಂಭದಲ್ಲಿ ಭಿತ್ತಿದ ಬೀಜಕ್ಕೆ ಈ ವಿಚ್ಛೇದವೇ ಸರಿಯಾದ ಅಂತ್ಯವೆಂದು ಠಾಗೂರರು ಹೇಳಿರುವ ಮಾತುಗಳ ಸಾರವನ್ನು ಲೇಖಕರು ಈ ಲೇಖನದಲ್ಲಿ ಉಲ್ಲೇಖಿಸುವುದನ್ನು ಮರೆತಿಲ್ಲ.

ನಾಟಕದ ಅಂತ್ಯ ದುರಂತವಾಗುವುದಾದರೆ, ದುರಂತ ಪಾತ್ರಯಾವುದು ? ಎಂಬ ಪ್ರಶ್ನೆಗೆ ಉತ್ತರವನ್ನು ದೀರ್ಘವಾಗಿ ಚರ್ಚಿಸುತ್ತಾರೆ. ಈ ನಾಟಕಕ್ಕೆ ದುರಂತತೆಯ ಔಚಿತ್ಯವೇನು ? ಎಂಬುದನು ಶಕುಂತಲೆಯ ದೃಷ್ಟಿಯಿಂದಲೂ ನೋಡುತ್ತಾರೆ. ಶಕುಂತಲೆಯನ್ನು ದುರಂತನಾಯಿಕೆಯನ್ನಾಗಿ ಭಾವಿಸಿ, ಅವರ ದುರಂತ ದೋಷ ಯಾವುದು ? ಎಂದು ಕಂಡುಹಿಡಿಯುತ್ತಾರೆ. ಕಾಳಿದಾಸನು ತನ್ನ ನಾಟಕದಲ್ಲಿ ತಂದಿರುವ ಕೆಲವೊಂದು ಪ್ರಸಂಗಗಳ ಔಚಿತ್ಯ ಮತ್ತು ಅನೌಚಿತ್ಯಗಳ ಬಗೆಗೆಗ ವಿವೇಚಿಸುತ್ತಾರೆ. ಹೀಗೆ ನಾಟಕವನ್ನು ಎಲ್ಲಾ ದೃಷ್ಠಿಕೋನಗಳಿಂದಲೂ ಚರ್ಚಿಸಿ, ವಿಮರ್ಶೆ ಮಾಡುತ್ತಾರೆ. ಅನಂತರ ವಿಕ್ರೋರ್ವಶೀಯ ಮತ್ತು ಶಾಕುಂತಲ ನಾಟಕಗಳನ್ನು ಪರಸ್ಪರ ಹೋಲಿಸಿ, ಅವುಗಳಲ್ಲಿರುವ ಸಮಾನ ಅಂಶಗಳನ್ನು ಗುರುತಿಸುತ್ತಾರೆ. ಕೊನೆಯಲ್ಲಿ ಕಾಳಿದಾಸನ ಕಾವ್ಯಪರಿಣತಿಯ ಬಗ್ಗೆ ಒಂದಿಷ್ಟು ಮಾತನಾಡುತ್ತಾರೆ. ಅವರ ಪ್ರಕಾರ ಶಾಕುಂತಲ ನಾಟಕವನ್ನು ಬರೆಯುವ ವೇಳೆಗೆ ಕಾಳಿದಾಸನ ಕಲೆ ಪರಿಣತವಾಗಿತ್ತು. ಅವನ ಅನುಭವವು ಗಾಢವಿಶಾಲವಾಗಿತ್ತು. ಆದುದರಿಂದಲೇ ಈ ನಾಟಕ ದುರಂತವಾಗಿದ್ದರೆ ಎಷ್ಟು ಅರ್ಥವತ್ತಾಗಬಹುದಿತ್ತೋ ಅದಕ್ಕೆ ಹತ್ತು ಪಟ್ಟು ಯಶಸ್ಸು ಮಂಗಳಾಂತದಿಂದ ಲಭಿಸಿದೆ.

## ಜನ್ನನ ಕಾವ್ಯಗಳಲ್ಲಿ ಪ್ರಣಯ ನಿರೂಪಣೆ

ಲೋಕದಲ್ಲಿ ಒಲುಮೆ ಮೂಡದ ಹೃದಯವಿಲ್ಲ ಪಂಡಿತ ಪಾಮರರೆನ್ನದೆ ಎಲ್ಲರೂ ಅದರ ಹಿಡಿತಕ್ಕೆ

---

೩. ತಿ.ನಂ.ಶ್ರೀ : ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೨೩

ಸಿಲುಕವರೇ ಆಗಿದ್ದಾರೆ. ನಮ್ಮ ಹಳೆಗನ್ನಡ ಸಾಹಿತ್ಯವೂ ಈ ಲೋಕ ಮೋಹಕವಾದ ಶೃಂಗಾರರಸಕ್ಕೆ ತನ್ನ ಕಾಣಿಕೆಯನ್ನು ಸಲ್ಲಿಸಿದೆ. ಲೋಕದಲ್ಲಿ ರತಿಭಾವವೂ ಸಾಮಾನ್ಯವಾದರೂ, ಕಾವ್ಯದಲ್ಲಿ ಅದರ ಹದವರಿತು, ಸರಸವಾಗಿ ನುಡಿದು ಓದುಗರನ್ನು ಮರಳು ಮಾಡುವ ಕೆಲವು ಮಂದಿಯಲ್ಲಿ ಜನ್ನನೂ ಒಬ್ಬನಾಗಿದ್ದಾನೆ. ಅವನ ಪ್ರಸಿದ್ಧ ಕಾವ್ಯಗಳಾದ 'ಅನಂತನಾಥ ಪುರಾಣ' ಮತ್ತು 'ಯಶೋಧರ ಚರಿತೆ' ಗಳನ್ನು ಪರಮ ಭಕ್ತಿಯಿಂದ ರಚಿಸಿದ್ದಾನೆ. ಇಂತಹ ಧಾರ್ಮಿಕ ಕೃತಿಗಳಲ್ಲಿ ಪ್ರಣಯ ರಹಸ್ಯಗಳನ್ನು ತರುವುದು ಉಚಿತವಲ್ಲ ಎಂಬುದನ್ನು ಜನ್ನ ಮರೆತು ವರ್ಣಿಸಿದ್ದಾನೆಂದು ಲೇಖಕರು ಅಭಿಪ್ರಾಯಿಸಿದ್ದಾರೆ.

ಜನ್ನನ ಕೃತಿಗಳಲ್ಲಿ ಇತರೆ ಕವಿಗಳ ಕೃತಿಗಳ ಇರುವಂತೆ ಶೃಂಗಾರವು ಅಲ್ಲಿಲ್ಲ. ಲಜ್ಜೆಮೀರಿ ಬೀದಿಗ ಬಂದಿರುವುದು ನಿಜ. ಸಾಮಾನ್ಯವಾಗಿ ಮಿಕ್ಕ ಕವಿಗಳು ಕಾಮಕೇಳಿಯನ್ನು ಮಾತ್ರ ಬಲ್ಲವರಾದರೆ, ಜನ್ನನಿಗೆ ಪ್ರೇಮ ವೈಚಿತ್ರ್ಯವೂ, ಅದರೆ ಗಂಭೀರತೆಗಳು ಅನುಭವಕ್ಕೆ ಬಂದಿವೆ. 'ರತಿರಹಸ್ಯವನ್ನು ಬಣ್ಣಿಸುವುದಕ್ಕಿಂತಲೂ ಪ್ರಣಯ ಸಮಸ್ಯೆಗಳನ್ನು ಬಿಡಿಸುವುದರ ಕಡೆಗೇ ಅವನ ಆಸಕ್ತಿ ಹೆಚ್ಚು, ಅದೇ ಅವನ ವೈಶಿಷ್ಟ್ಯ. ಅವನ ಕಾವ್ಯದ ತತ್ವ ''[೪]ಎಂಬುದು ಲೇಖಕರ ಹೇಳಿಕೆಯಾಗಿದೆ.

ಲೇಖಕನ ಮುಂದಿನ ಭಾಗದಲ್ಲಿ 'ಯಶೋಧರ ಚರಿತೆ' ಮತ್ತು 'ಅನಂತನಾಥ ಪುರಾಣ'ದ ಕಥಾಸಾರವನ್ನು ಕೊಟ್ಟು, ಅನಂತರ ವಿಮರ್ಶಿಸುತ್ತಾರೆ. ಯಶೋಧರನೊಂದಿಗೆ ಸ್ವರ್ಗಸುಖವನ್ನು ಅನುಭವಿಸುತ್ತಿದ್ದ ಅಮೃತ ಮತಿ ಅದಮ್ಯವಾದ ಮೋಹಕ್ಕೆ ಬಲಿಯಾಗಿ ಹೇಗೆ ಶೀಲವಳಿಯಾದಳು ನರಕಕ್ಕಿಳಿದಳು ಎಂಬುದನ್ನು, ಅವಳ ಅಧೋಗತಿಯ ಹೆಜ್ಜೆಹೆಜ್ಜೆಯನ್ನು ಸೂಕ್ಷ್ಮದೃಷ್ಟಿಯಿಂದ ಜನ್ನ ಚಿತ್ರಿಸಿದ್ದಾನೆ. ಜೊತೆಗೆ ಯಶೋಧರನ ಕ್ರೋಧ, ಧೃತಿ, ಅವನ ಮನೋ ನಿಗ್ರಹವನ್ನು ಮೀರಿಬಂದ ಭವದ ಅಸೂಯೆಯನ್ನು, ಜನ್ನ ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವುದನ್ನು ಲೇಖಕರು ಗುರುತಿಸುತ್ತಾರೆ. ಇನ್ನೂ 'ಅನಂತನಾಥ ಪುರಾಣ'ದಲ್ಲಿ ಚಂಡಶಾಸನ, ತನ್ನ ಪ್ರಿಯೆ ಸತ್ತಳೆದು ತಾನೂ ದೇಹತ್ಯಾಗ ಮಾಡಿರುವುದನ್ನು ಚರ್ಚಿಸುತ್ತಾ, ಗಂಡನು ಸತ್ತಾಗ ಹೆಂಡತಿ ಸಹಗಮನ ಮಾಡಿದ ಪ್ರಸಂಗಗಳು ಬೇಕಾದಷ್ಟಿವೆ. ಹಿಂದಿನ ಕಾಲದಲ್ಲಿ ಅದು ಆಚರಣೆಯೇ ಆಗಿತ್ತು. ಆದರೆ ಪ್ರಿಯೆ ತೀರಿಹೋದಾಗ, ಅವಳಲ್ಲಿ ಮೋಹಿತನಾದ ಗಂಡನು ಸಹಗಮನ ಮಾಡುವುದು ನಮ್ಮ ಪ್ರಪಂಚಕ್ಕೆ ಹೊಸತು. ಅಷ್ಟೇ ಅಲ್ಲ ಸಾಹಿತ್ಯದಲ್ಲಿ ಜನ್ನನ ಕಲ್ಪನೆಗೆ ಮಾತ್ರ ನಿಲುಕಿದ್ದು ಎನ್ನುವ ಲೇಖಕರು, ಇದು ಅಷ್ಟು ಅಸಂಭವವೇ? ಎಂಬ ಪ್ರಶ್ನೆಯನ್ನೆತ್ತುತ್ತಾರೆ. ಮರುಕ್ಷಣದಲ್ಲೇ ಮೋಹವು ಸ್ತ್ರೀಪುರುಷರಲ್ಲಿ ಭೇದವಿಲ್ಲ ಅದು ಉಲ್ಬಣವಾದಾಗ ಏನು ಬೇಕಾದರೂ ನಡೆಯಬಹುದು ಎಂಬ ಉತ್ತರವನ್ನು ಕಂಡುಕೊಂಡು ಸಮಾಧಾನ ಪಟ್ಟುಕೊಳ್ಳುತ್ತಾರೆ. ಇಲ್ಲಿ ಇನ್ನೊಂದು ವಿಷಯವನ್ನು ಲೇಖಕರು ಪ್ರಸ್ತಾಪಿಸುತ್ತಾರೆ. ಅದೆಂದರೆ 'ಅನಂತನಾಥ ಪುರಾಣ'ದಲ್ಲಿ ಸುನಂದೆಯು ತನ್ನ ಪತಿ ತೀರಿಕೊಂಡ ಸುದ್ದಿ

೪. ತಿ.ನಂ.ಶ್ರೀ : ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೪೬

ಕೇಳಿ ತಾನೂ ಮರಣವನ್ನಪ್ಪುತ್ತಾಳೆ. ರಾಮಾಯಣದಲ್ಲಿ ರಾಮನು ಮಡಿದನೆಂಬ ಸುದ್ದಿಯನ್ನು ಕೇಳಿದಾಗ ರಾವಣನಿಂದ ಅಪಹರಣಕ್ಕೊಳಗಾದ ಸೀತೆಯು ಗೋಳಾಡಿದಳೆ ಹೊರೆತು ಮಡಿಯಲಿಲ್ಲ. ಆದರೆ ಸುನಂದೆ ಪ್ರಾಣ ಪಟ್ಟನೆ ಹಾರಿಹೋಯಿತು ಎಂದು ಹೇಳಿ ಸೀತೆಗೂ ಅವಳು ಮಿಗಿಲೆಂದು ಸೂಚಿಸುವುದು ಜನ್ನನ ಆಶಯವಾಗಿರಬಹುದು ಎಂದು ಲೇಖಕರು ಊಹಿಸುತ್ತಾರೆ. ಅವರ ಊಹೆ ಸುಳ್ಳೋ, ನಿಜವೋ, ಆದರೆ ಜನ್ನನ ಉದ್ದೇಶ ಸುನಂದೆಯ ಮರಣವಾಗಿತ್ತು. ಅವಳು ಸಾಯದಿದ್ದರೆ ಚಂಡಶಾಸನ ಸಹಗಮನ ಮಾಡುತ್ತಿರಲಿಲ್ಲ ಎಂದು ನಾವಿಲ್ಲಿ ನೆನೆಯಬೇಕು. ಇನ್ನೂ ಸುನಂದೆಯ ಗಂಡ ವಸುಷೇಣ ಮಡದಿ ಮಡಿದ ವಾರ್ತೆ ಕೇಳಿ ಸ್ತಂಭಿತನಾಗಿ ಇನ್ನು ಯಾವ ನಲ್ಲೆಗಾಗಿ ಕಾದಬೇಕು, ಯಾವ ಶತ್ರುಗಳನ್ನು ಕೊಲ್ಲಬೇಕೆಂದು ಭಾವಿಸಿ ತಪಸ್ಸಿಗೆ ನಡೆಯುತ್ತಾನೆ. ಚಂಡಶಾಸನ ಮತ್ತು ವಸುಷೇಣನಿಗಿರುವ ವ್ಯತ್ಯಾಸವನ್ನು ಲೇಖಕರು ಗುರುತಿಸುತ್ತಾರೆ.

ಅಮೃತಮತಿ ಮತ್ತು ಚಂಡಶಾಸನ ಅನಾಹುತಕ್ಕೆ ಅವರ ದುಷ್ಟ ಬುದ್ಧಿಯೊಂದೇಹೊಣೆಯಲ್ಲ, ವಿಧಿ ಇವರಿಬ್ಬರನ್ನೂ ಕಣ್ಣುಕಟ್ಟಿ ಮೋಹದ ಕೂಪಕ್ಕೆ ನೂಕಿತು ಎಂಬುದನ್ನು ಲೇಖಕರು ಮರೆಯದೆ ಉಲ್ಲೇಖಿಸುತ್ತಾರೆ. ಅಮೃತಮತಿಗಾಗಲಿ ಚಂಡಶಾಸನನಿಗಾಗಲಿ ಪ್ರೇಮವು ವಿದೋಪರೂಪದಲ್ಲ, ಕ್ಷಣಿಕಾಲದ ರೂಪದಲ್ಲಿ ಮೃದುಗತಿಯಿಂದ ಬರಲಿಲ್ಲ. ಅವರ ಪ್ರಣಯ ಉಗ್ರವಾಗಿತ್ತು ಮತ್ತು ಸ್ಥಿರವಾಗಿತ್ತು. ಆದುದರಿಂದಲೇ ಕೊಳೆತು ನಾರುತ್ತಿದ್ದರೂ ಅಷ್ಟವಂಕನನ್ನೇ ಅಮೃತಮತಿ ವರಿಸಿದಳಾದರೂ ಅವಳ ಅನನ್ಯವಾದ ಪ್ರಣಯಕ್ಕೆ ತಲೆದೂಗಬೇಕಲ್ಲವೆ ? ಅದೇ ರೀತಿ ಚಂಡಶಾಸನನ ಸಹಗಮನಕ್ಕೆ ಮೆಚ್ಚುಗೆ ವ್ಯಕ್ತಪಡಿಸಬೇಕಲ್ಲವೇ ? ಎಂದು ಪ್ರಶ್ನಿಸುವ ಲೇಖಕರ ಪ್ರಶ್ನೆಗೆ ಹೌದು ಎಂಬ ತಲೆಯಾಡಿಸುವದರಲ್ಲಿ ತಪ್ಪಿಲ್ಲ.

## ಕನ್ನಡ ಭಾರತದಲ್ಲಿ ಶೃಂಗಾರದ ಸನ್ನಿವೇಶಗಳು

ಶೃಂಗಾರವು ಮೋಹಕವಾದ ರಸವಾಗಿದೆ. ಇದರ ನಿರೂಪಣೆಯಲ್ಲಿ ಕವಿಗಳೇ ಸಾಮಾನ್ಯವಾಗಿ ಉತ್ಸಕರಾಗಿರುತ್ತಾರೆ. ಬೇರೆ ಕಡೆಗಳಲ್ಲಿ ಮನಸ್ಸನ್ನು ಎಷ್ಟು ಬಿಗಿ ಹಿಡಿದಿದ್ದರೂ ಇಲ್ಲಿ ಅವರು ಸ್ವತಂತ್ರವಾಗಿ ವರ್ತಿಸುತ್ತಾರೆ. ಶೃಂಗಾರ ಸನ್ನಿವೇಶಗಳನ್ನು ತರಲು ಎಷ್ಟೋ ವೇಳೆ ಕತೆಯ ನೇರವಾದ ಮಾರ್ಗವನ್ನು ಬಿಟ್ಟು ಅತ್ತಿತ್ತ ಹೊರಳುತ್ತಾರೆ ಎನ್ನುವ ಲೇಖಕರು ಈ ದೌರ್ಬಲ್ಯವನ್ನು ಪಂಪನಲ್ಲಿಯೂ ಗುರುತಿಸುತ್ತಾರೆ. ಅದನ್ನು ಸಾಬೀತುಪಡಿಸಲು 'ಪಂಪ ಭಾರತ'ದಲ್ಲಿ ನಾಲ್ಕನೆಯ ಆಶ್ವಾಸಗಳಲ್ಲಿ ಅರ್ಜುನ ಸುಭದ್ರೆಯರ ವಿರಹಸಂತಾಪವನ್ನು ದೀರ್ಘಗೊಳಿಸುವುದನ್ನು, ಸುಮ್ಮಸುಮ್ಮನೆ ಅರ್ಜುನನನ್ನು ಸೂಳೆಗೇರಿಯಲ್ಲಿ ತೊಳಲಿಸಿರುವುದನ್ನು ನಿದರ್ಶನವಾಗಿ ಕೊಡುತ್ತಾರೆ.

ಕುಮಾರವ್ಯಾಸನಲ್ಲಿ ಕಾವ್ಯ ಪದ್ಧತಿಗೆ ಸಂಬಂಧಿಸಿದಂತೆ ಹಲವು ದೋಷಗಳಿದ್ದರೂ, ಶೃಂಗಾರ ಪ್ರಿಯತೆಗೆ ಸಂಬಂಧಿಸಿದಂತೆ ಅವನು ದೋಷಗಳಿಂದ ದೂರವಿದ್ದಾನೆ ಎಂದು ಅಭಿಪ್ರಾಯಪಡುವ ಲೇಖಕರು 'ಕುಮಾರವ್ಯಾಸ ಭಾರತ' ಮೂರು ಪ್ರಸಂಗಗಳನ್ನು ಎತ್ತಿಕೊಂಡು, ಕುಮಾರವ್ಯಾಸ ಶೃಂಗಾರ ರಸವನ್ನು ಹೇಗೆ ಹರಿಸಿದ್ದಾನೆಂಬುದನ್ನು ವಿಶ್ಲೇಷಿಸುತ್ತಾರೆ. ಅವುಗಳಲ್ಲಿ ಮೊದಲನೆಯದು ದ್ರೌಪದಿಗೆ ಸಂಬಂಧಿಸಿದ ಕೀಚಕವೃತ್ತಾಂತ. ಲೇಖಕರು ವಿಶ್ಲೇಷಣೆಗೆ ತೊಡಗುವ ಮೊದಲು ಕೀಚಕನ ಪ್ರಸಂಗವನ್ನು ಬಿಚ್ಚಿಡುತ್ತಾರೆ. ಈ ಪ್ರಸಂಗದಲ್ಲಿ ನಮ್ಮ ಸಹಾನುಭೂತಿ ದ್ರೌಪದಿಯ ಕಡೆಗೆ ಹೆಚ್ಚು ಹರಿಯುತ್ತದೆ. ಕೀಚಕನ ನೀಚ ವರ್ತನೆ, ಅವನು ದ್ರೌಪದಿಗೆ ಕೊಟ್ಟ ಕಷ್ಟಗಳು, ಅವಳನ್ನು ಕಾಲಿನಿಂದ ಒದ್ದು ಅವಮಾನ ಮಾಡಿದ್ದನ್ನು ನೋಡಿ ಭೀಮನಂತೆ ನಮಗೂ ಮನಸ್ಸು ಕನಲುತ್ತದೆ. ಭೀಮನಿಂದ ಹತನಾದಾಗ ದ್ರೌಪದಿಯೊಂದಿಗೆ ನಾವು ಖುಷಿ ಪಡುತ್ತೇವೆ. ಆದರೆ ಕವಿ ಕೀಚನ ಹೃದಯವನ್ನು ನಮಗೆ ತೋರಿಸಿ, ಅವನ ವಿಷಯದಲ್ಲಿ ನಮ್ಮನ್ನು ಕ್ಷಣಕಾಲ ಮರುಗಿಸುವ ಪರಿಯನ್ನು ಲೇಖಕರು ಬಣ್ಣಿಸುತ್ತಾರೆ. ಅವರ ಪ್ರಕಾರ ಕುಮಾರವ್ಯಾಸನು ದ್ರೌಪದಿಯ ರೂಪ ಕೀಚಕನನ್ನು ಮಂತ್ರದಂತೆ ಸೆಳೆದು ಕಟ್ಟಿದ ಪ್ರಸಂಗವನ್ನು ಬಲು ಚೆನ್ನಾಗಿ ಬಣ್ಣಿಸಿದ್ದಾನೆ. ''ದ್ರುಪದತನುಜೆಯನಾಲಿಯಲಿ ನುಂಗಿದನು, ಮುಂಗಾಣಿಕೆಯಲೇ ಸೂರೆವೋದುದು ಮನದ ಸರ್ವಸ್ವ, ಪ್ರಾಣ ಸಡಿಲಿತು; ಬುದ್ಧಿ ಕದಡಿತು''[೫], ಯಾರು ಎಷ್ಟು ನೀತಿ ಧರ್ಮಗಳನ್ನು ಹೇಳಿದರೂ ಮನಸ್ಸಿಗೆ ನಾಟಲಿಲ್ಲ. ತನ್ನ ಬುದ್ಧಿಗೆ ಮಣೆಯಿತ್ತು ನಾಶಹೊಂದಿದನು. ಈ ಪ್ರಸಂಗವನ್ನು ಕುರಿತು ಲೇಖಕರ ಅಭಿಪ್ರಾಯವೆಂದರೆ ಕೀಚಕನು ಒರಟನೆಂಬುದು ನಿಜ. ಪಾಪಿಯೆಂಬುದು ನಿಜ. ಆದರೆ ಅವನ ಕಾಮದ ಕಿಚ್ಚನ್ನು ನಾರಣಪ್ಪನು ಈ ರೀತಿ ಚಿತ್ರಿಸಿ, ಕೀಚಕನಿಗೆ ದ್ರೌಪದಿಯ ಹುಚ್ಚು ಹಿಡಿದಿರುವಾಗ ಮನೋನಿಗ್ರಹ ಹೇಗೆ ಸಾಧ್ಯವಾಗುತ್ತದೆ ಎಂಬುದನ್ನು ವಿವರಿಸಿ, ತನ್ನ ವಿಶಾಲ ಹೃದಯದಲ್ಲಿ ಪಾಪಿಯ ಮನೋವೃತ್ತಿಯನು ಕುರಿತು ಅನುಕಂಪವುಂಟೆಂದು ತೋರಿಸಿರುವುದನ್ನು ಲೇಖಕರು ಅಭಿನಂದಿಸುತ್ತಾರೆ.

ಎರಡನೆಯ ಪ್ರಸಂಗ ಪಾಂಡು ಮಾದ್ರಿಯರಿಗೆ ಸಂಬಂಧಿಸಿದ್ದು ''ದುರಂತವಾಗಿ ಪರಿಣಮಿಸುವ ದಾಂಪತ್ಯ ಪ್ರೇಮದ ಕಥೆಗಳು ಸಾಹಿತ್ಯದಲ್ಲಿ ಹಲವಿದ್ದರೂ, ಪಾಂಡು ಮಾದ್ರಿಯರ ಕಥೆಯಷ್ಟು ವಾಚಕರ ಕರುಳನ್ನು ಹಿಂಡುವುವು ವಿರಳವೇ ಸರಿ''[೬]. ಇದಕ್ಕೆ ಕಾರಣ ಈ ಪ್ರಸಂಗ ಅಷ್ಟು ಕರುಣಾಜನಕವಾಗಿದೆ.'ವ್ಯಾಸಭಾರತ' ಮತ್ತು 'ಪಂಪಭಾರತ'ಗಳಲ್ಲಿ ಅದರ ನಿರೂಪಣೆಯು ಉತ್ತಮವಾಗಿ ಬಂದಿದೆ. ಆದರೆ ಈ ದುರಂತ ಕಥೆಯ ಆಳವನ್ನು ಅಳೆದು, ಸುರಿದು ಎತ್ತಿ ಕಟ್ಟಿದ ಕೆಲಸ ಮಾಡಿದವನು ನಾರಣಪ್ಪನು ಎಂದು ಹೇಳಿದರೆ ಅದು ಹಿಂದಿನ ಪೂಜ್ಯ ಕವಿಗಳಿಗೆ ಅಗೌರವದ ಮಾತಾಗುವುದಿಲ್ಲ ಎಂದು ವಿನಯಪೂರ್ವಕವಾಗಿ ಲೇಖಕರು ಪ್ರಾರ್ಥಿಸುತ್ತಾರೆ. ಕನ್ನಡಭಾರತದಲ್ಲಿ ಈ ಪ್ರಸಂಗ ಉಜ್ವಲವಾದ ಸರ್ವಾಂಗಪೂರ್ಣವಾದ ಒಂದು ಬಿಡಿ

೫. ತಿ.ನಂ.ಶ್ರೀ: ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೬೯
೬. ಅದೇ ಪುಟ ೭೦

ವಜ್ರದಂತೆ ಹೊಳೆಯುತ್ತದೆ ಎಂಬುದು ಅವರ ಅಭಿಪ್ರಾಯ. ಪಾಂಡುರಾಜನಿಗೆ ಮುನಿಯಿಂದ ಶಾಪವಿದ್ದರೂ, ಮೋಹಕ್ಕೆ ಬಿದ್ದು ಪ್ರಾಣ ಕಳೆದುಕೊಳ್ಳುತ್ತಾನೆ. ಹರೆಯದಲ್ಲಿ ಕಠಿಣ ಬ್ರಹ್ಮಚರ್ಯ ಆಚರಿಸಿದ ಪಾಂಡುವಿನ ಮನಸ್ಸನ್ನು ಮುಪ್ಪಿನಲ್ಲಿ ಕದಲಿಸುವ ಸನ್ನಿವೇಶದ ಪ್ರಬಲತೆಯನ್ನು ತಿಳಿದ ಕವಿ ವಸಂತದಾಳಿಯನ್ನು ಅಮೋಘವಾಗಿ ವರ್ಣಿಸಿದ್ದಾನೆಂದು ಲೇಖಕರು ಹೇಳುತ್ತಾರೆ. ಪಾಂಡುವಿನ ಮರಣಕ್ಕೆ ಪ್ರಕೃತಿ ಸಂಚು ಮಾಡಿತೆಂದೂ, ದೈವ ಹಠತೊಟ್ಟದ್ದರೆ ಅವನು ಬದುಕುತ್ತಿದ್ದನೆಂಬ ಭಾವನೆ ನಮಗೆ ಇದರಿಂದ ಹುಟ್ಟುವಂತೆ ಕವಿ ಚಿತ್ರಿಸಿದ್ದಾನೆ. ಇದೇ ಸಮಯದಲ್ಲಿ ಮಾದ್ರಿಯ ಸೌಂದರ್ಯವನ್ನು ವೈಭವೀಕರಿಸಿದರೆ ಭಾವಸಮಾದಿ ಸಡಿಲ ಬಿಡುವುದೆಂದು ಕವಿಗೆ ಗೊತ್ತಾಗಿ ಕೇವಲ ಎರಡು ಸಾಲಿನಲ್ಲಿ ಅದನ್ನು ಸೂಚಿಸಿ, ಪಾಂಡುವಿನ ಸ್ಥೈರ್ಯ ತಡೆದು ಹೋದ ಅಂಶಕ್ಕೆ ತಿರುಗುತ್ತಾನೆ. ಇಲ್ಲಿ ಲೇಖಕರ ಮುಖ್ಯ ಪ್ರಶ್ನೆ ಎಂದರೆ ನಾವು ಪಾಂಡುಯೋಗಿ ಇಷ್ಟು ದಿನದ ಮೇಲೆ ಮೋಹದ ಸುಳಿಯಲ್ಲಿ ಮುಳುಗಿದ್ದಕ್ಕಾಗಿ ಬೆರಗುಪಡಬೇಕೋ ಅಥವಾ ಗಂಡಹೆಂಡಿರ ಸಹಜ ಸಮಾಗಮಕ್ಕೆ ಈ ರೀತಿ ಘೋರಪರ್ಯಾವಸಾನ ತಟ್ಟದ್ದಕ್ಕಾಗಿ ಬೆರಗು ಪಡಬೇಕೋ ಎಂಬುದು.

ಇನ್ನು ಕೊನೆಯ ಹಾಗೂ ಮೂರನೆಯ ಪ್ರಸಂಗ ಅರ್ಜುನ ಮತ್ತು ಊರ್ವಶಿಯರ ಪ್ರಸಂಗ ಈ ಸನ್ನಿವೇಶದಲ್ಲಿ ಊರ್ವಶಿ ಎಷ್ಟು ಅಂಗಲಾಚಿ, ಬಾಯಿಬಿಟ್ಟು ಬೇಡಿದರೂ ಅರ್ಜುನ ಅವಳಿಗೆ ಸೋಲುವುದಿಲ್ಲ. ''ಈ ಅಪೂರ್ವ ಪ್ರಸಂಗದ ಉದ್ದಕ್ಕೂ ನಾವು ಅರ್ಜುನನ ಮನೋನಿಶ್ಚಿಯವನ್ನು ನೋಡುತ್ತೇವೆ. ಊರ್ವಶಿಯಂಥ ಚಲುವೆ ಬಂದು ಪ್ರಣಯಭಿಕ್ಷೆಯನ್ನು ಬೇಡುತ್ತಿರುವಾಗ ಯಾವ ಧೀರನ ಎದೆ ತಾನೆ ಜಗ್ಗದು ! ಆದರೆ ಅರ್ಜುನನಿಗೆ ಅವಳು ತಾಯಂತೆ ಕಂಡಳು''[೭]. ಇಂದ್ರಕೀಲದಲ್ಲಿ ಅರ್ಜುನನು ಭಕ್ತಿಯಿಂದ ಶಿವನನ್ನು ಜಯಿಸಿದ್ದು ದೊಡ್ಡದಲ್ಲ. ಊರ್ವಶಿಯಿಂದ ಕಾಮವನ್ನು ಜಯಸಿದ್ದು ಮಹೋನ್ನತವಾಗಿದೆ. ಶಿವನಿಂದ ಪಾಶುಪಾತಾಸ್ತ್ರವನ್ನು ಪಡೆದರೂ, ಅವನಿಗೆ ಊರ್ವಶಿ ಪ್ರಣಯದ ಸತ್ತ್ವ ಪರೀಕ್ಷೆಯೇ ಇಮ್ಮಡಿ ಕಳೆಯನ್ನು ಕೊಟ್ಟಿತು. ಇಲ್ಲಿ ಊರ್ವಶಿಗೆ ಅತಿದುಸ್ಸಹವಾದ ಅವಸ್ಥೆಯುಂಟಾಯಿತು. ಹೆಣ್ಣಿಗೆ ತನ್ನ ಪ್ರಣಯ ಯಾಚನೆಗೆ ತಿರಸ್ಕಾರವಾಗುವುದಕ್ಕಿಂತ ದೊಡ್ಡ ಅವಮಾನವಿಲ್ಲ. ಹೀಗಾಗಿ ಊರ್ವಶಿಗಾಗಿ ನಾವು ಮರಗುತ್ತೇವೆ. ಅವಳ ಪ್ರಣಯಭಂಗದಿಂದ ತಾನೇ ಅರ್ಜುನನ ಗೌರವ ಹೆಚ್ಚಾದುದ್ದು. ಅವಳು ಕೊಟ್ಟ ಶಾಪವೂ, ಅಜ್ಞಾತವಾಸದಲ್ಲಿ ಅರ್ಜುನನಿಗೆ ಉಪಯೋಗವೇ ಆಗುವುದನ್ನು ಲೇಖಕರು ಗುರುತಿಸುತ್ತಾರೆ.

ಒಟ್ಟಿನಲ್ಲಿ ''ಕನ್ನಡ ಭಾರತದಲ್ಲಿ ಶೃಂಗಾರವು ಅಮುಖ್ಯವಾದ ರಸವಾಗಿದೆ, ಅದನ್ನು ಆ ಮೆಟ್ಟಲಲ್ಲೇ ನಿಲ್ಲಿಸಿ, ನಿಲ್ಲಿಸಿದರೂ ನಿರೂಪಣೆಯನ್ನು ಲೋಕೋತ್ತರವಾಗಿ ನಿರ್ವಹಿಸುವ ಶಕ್ತಿ ಕುಮಾರವ್ಯಾಸನಂಥ ಮಹಾಕವಿಗೆ ಮಾತ್ರ ಸಾಧ್ಯ''[೮] ಎಂದು ಮೆಚ್ಚುಗೆ ವ್ಯಕ್ತಪಡಿಸುತ್ತಾ ಈ ಲೇಖನವನ್ನು ಮುಗಿಸುತ್ತಾರೆ.

---

೭. ತಿ.ನಂ.ಶ್ರೀ : ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೭೫
೮. ಅದೇ ಪುಟ ೭೭

## ಮಹಾದೇವಿಯಕ್ಕನ ಕೆಲವು ವಚನಗಳು

ಕ್ರಿ.ಶ. ಹನ್ನೆರಡನೆಯ ಶತಮಾನದ ವೀರಶೈವ ತಾರಾಗಣದಲ್ಲಿ ಮಹಾದೇವಿಯಕ್ಕನ ಅಪೂರ್ವಕಾಂತಿ ಯಾರ ಕಣ್ಣನ್ನಾದರೂ ಸೆಳೆಯುತ್ತದೆ. ಬಸವಣ್ಣ, ಅಲ್ಲಮಪ್ರಭುಗಳಿಂದ ಪ್ರಥಮ ಶ್ರೇಣಿಯ ಜ್ಯೋತಿಗಳೊಡನೆ ಹೋಲಿಸಿದಾಗ ಕೂಡ ಆಕೆಯ ವರ್ಚಸ್ಸು ಕುಂದುವುದಿಲ್ಲ ಎನ್ನುವ ಲೇಖಕರ ಮಾತಿನಲ್ಲಿ ಸಂಪ್ರದಾಯಸ್ಥ ಸಮಾಜದಲ್ಲಿ ಸ್ತ್ರೀಯೊಬ್ಬಳು ಪುರುಷನಿಗೆ ಸರಿಸಮನಾಗಿ ಬೆಳೆದ ರೀತಿಯನ್ನು ಕುರಿತು ಹೇಳುತ್ತಾರೆ. ಅಕ್ಕನ ವಚನಗಳು ಇಂದು ಜಾತಿಮತಗಳ ಎಲ್ಲೆಯನ್ನು ದಾಟಿ ಎಲ್ಲಾ ಕನ್ನಡಿಗರ ಹೃದಯವನ್ನು ಸೂರೆಗೊಂಡಿವೆ. ಅವುಗಳ ಕಾವ್ಯ ಸಂಪತ್ತು, ಅವುಗಳಲ್ಲಿ ವ್ಯಕ್ತವಾಗುವ ಮಹಾದೇವಿಯ ಮೂರ್ತಿ ಸ್ವರೂಪವೂ ಕನ್ನಡ ಸಾಹಿತ್ಯಕ್ಕೆ ಭೂಷಣವಾಗಿ ನಿಂತಿವೆ ಎಂಬುದು ಲೇಖಕರ ಅಭಿಮತ.

ವಚನಕಾರರಲ್ಲಿ ಬಸವಣ್ಣನವರ ಗುಂಪಿಗೆ ಮಹಾದೇವಿಅಕ್ಕನೂ ಸೇರುತ್ತಾಳೆ. ಈಕೆಯ ರಚನೆಗಳು ತತ್ತ್ವಪದ ಪ್ರಧಾನವಾದವುಗಳಲ್ಲ. 'ಚನ್ನಮಲ್ಲಿಕಾರ್ಜುನ' ಎಂಬ ಅಂಕಿತವನ್ನೊಳಗೊಂಡು ದೊರೆಯುವ ವಚನಗಳಲ್ಲಿ ಈ ವರ್ಗಕ್ಕೆ ಸೇರತಕ್ಕವೂ ಇವೆ. ಲೇಖಕರ ಪ್ರಕಾರ ಅವೇ ವಚನಗಳಲ್ಲಿ ಬಹುಭಾಗ ರಸಾದ್ರ್ರವಾಗಿದ್ದು, ಉಪಮಾನಗಳಿಂದ ಚಿತ್ರಕಲ್ಪನೆಗಳಿಂದ ಮನೋಹರವಾಗಿವೆ. ಅವಳದು ಕವಿಯ ಹೃದಯ, ಕವಿಯ ಕಣ್ಣಾಗಿತ್ತು ಎಂಬುದನ್ನು ಇವು ಸಾರುತ್ತವೆ. ಇದರ ಜೊತೆಗೆ ಸೊಗಸನ್ನು ಕಂಡವರಿಗೆ ಇಂಥ ಇನ್ನಷ್ಟನ್ನು ಓದಬೇಕೆಂಬ ಆಸೆ ಹುಟ್ಟುತ್ತದೆ.

ಇದೂವರೆಗೆ ಮಹಾದೇವಿಯಕ್ಕನ ವಚನಗಳನ್ನೆಲ್ಲಾ ಒಟ್ಟುಗೂಡಿಸಿದ ಪುರಾತನ ಸಂಕಲನ ದೊರೆತಿಲ್ಲ ಎಂಬುದೇ ಲೇಖಕರಿಗೆ ಬೇಸರವಾಗಿದೆ. ಅವರು ಗುರುತಿಸಿದಂತೆ ರಾಮಬಹದ್ದೂರ್ ಶ್ರೀಮಾನ್ ಪಿ.ಜಿ. ಹಳಕಟ್ಟಿವರು ಹನ್ನೆರಡು ವಚನಸಂಗ್ರಹಗಳೊಳಗಿನ ವಚನಗಳನ್ನು ಬೇರೆತೆಗೆದು ಒಂದು ಕ್ರಮದಲ್ಲಿ ಜೋಡಿಸಿ 'ಮಹಾದೇವಿಅಕ್ಕನ ವಚನಗಳು' ಎಂಬ ಹೆಸರಿನಿಂದ ಪ್ರಸಿದ್ಧಿ ಪಡಿಸಿದ್ದಾರೆ. ಅಲ್ಲಿಂದೀಚೆಗೆ ಆ ಕೃತಿ ಯಾವ ವ್ಯತ್ಯಾಸವೂ ಇಲ್ಲದೆ ಅಚ್ಚುಗುತ್ತಿದೆ. ಇದರಲ್ಲಿ ಹಳಕಟ್ಟಿಯವರು ಹೆಚ್ಚಿನ ವಚನಗಳನ್ನು ಸೇರಿಸಿಲ್ಲ. ಅವರು ಒಂದು ಘಟಕ್ಕೆ ತಂದು ನಿಲ್ಲಿಸಿರುವ ಕಾರ್ಯವನ್ನು ಮುಂದುವರಿಸುವುದೇ ತಮ್ಮ ಲೇಖನದ ಉದ್ದೇಶವೆಂದು ಅಭಿಪ್ರಾಯಪಡುವ ಲೇಖಕರಿಗೆ ಈ ಲೇಖನವನ್ನು ಹಳಕಟ್ಟಿಯವರ ಸಂಗ್ರಹಕ್ಕೆ ಪರಿಶಿಷ್ಟದಂತೆ ಬಳಸಿಕೊಂಡರೂ ಹಾನಿಯಿಲ್ಲ ಎಂಬುದನ್ನು ವ್ಯಕ್ತಪಡಿಸಿದ್ದಾರೆ. ಹಳಕಟ್ಟಿಯವರಿಗೆ ಬಹುಶಃ ದೊರೆಯದಿದ್ದ ಎರಡು ವಚನಗಳನ್ನು ಲೇಖಕರು ಇಲ್ಲಿ ಉಲ್ಲೇಖಿಸುತ್ತಾರೆ.

''ಬೋಳೆಯನೆಂದು ನಂಬಬೇಡ, ಡಾಳಕನವನು, ಜಗದ ಬಿನ್ನಾಣಿ, ಬಾಣ ಮಯೂರ ಕಾಳಿದಾಸ ವೋಹಿಲನುದ್ಭಟ ಮೆಲುಹಣನವರಿಗಿತ್ತ ಪರಿ ಬೇರಿ, ಮುಕ್ತಿ ಭುಕ್ತಿಯ ತೋರಿ ಭಕ್ತಿಯ ಮರಿಸಿಕೊಂಬನು ಚೆನ್ನಮಲ್ಲಿಕಾರ್ಜುನ.

ಕೋಲ ತುದಿಯ ಕೋಡಗದಂತೆ ನೇಣತುದಿಯ ಬೊಂಬೆಯಂತೆ ಆಡಿದೆನ್ನಯ್ಯ ನೀನಾಡಿಸಿದಂತೆ. ಆನು ನುಡಿದೆನಯ್ಯ ನೀನು ನುಡಿಸಿದಂತೆ. ಆನು ಇದ್ದೆನಯ್ಯಾ ನೀನು ಇರಿಸಿದಂತೆ, ಜಗದ ಯಂತ್ರವಾಹಕ ಚೆನ್ನಮಲ್ಲಿಕಾರ್ಜುನ ಸಾಕೆಂಬಕ್ಕ''[೯].

ಮಹಾದೇವಿಯಕ್ಕನ ಕಥೆ ಪ್ರಭುಲಿಂಗಲೀಲೆಯ ಹತ್ತು ಮತ್ತು ಹದಿನೇಳನೆಯ ಗತಿಗಳಲ್ಲಿ ಮುಖ್ಯವಾಗಿ ನಿರೂಪಿಸಿರುವುದನ್ನು ಲೇಖಕರು ಇಲ್ಲಿ ಪ್ರಸ್ತಾಪಿಸುತ್ತಾರೆ. ಶೂನ್ಯಸಂಪಾದನೆಗಳ ಬೇರೆ ಬೇರೆ ಪರಿಷ್ಕರಣಗಳಲ್ಲಿ ಮಹಾದೇವಿಯಕ್ಕನ ವೃತ್ತಾಂತವನ್ನು ನಿರೂಪಿಸುವಾಗ, ವಚನ ಸಂಖ್ಯೆಯಲ್ಲಿ ಬೇಧವಿದೆ. ಇವುಗಳಲ್ಲಿ ಮಹಾದೇವಿಯಕ್ಕನನ್ನು ಕುರಿತ ಭಾಗ ಹೆಚ್ಚು ವಿಸ್ತಾರವಾಗಿ ಬರುವುದು ಹಲಗೆಯ ದೇವರ ಶೂನ್ಯ ಸಂಪಾದನೆಯಲ್ಲಿ ಎಂದು ತಿಳಿಸುತ್ತಾ ಅದರಲ್ಲಿ ನಿರೂಪಿತವಾಗಿ ಅಕ್ಕನ ಕಥೆಯನ್ನು ವಿವರಿಸುತ್ತಾರೆ.

ಶೂನ್ಯಸಂಪಾದನೆಯ ಭಿನ್ನಪಾಠಗಳಲ್ಲಿ ಬಂದಿರುವ ಅಕ್ಕನ ವಚನಗಳನ್ನೆಲ್ಲ ಸಂಗ್ರಹಿಸುವ ಕೆಲಸಕ್ಕೆ ಕೈಹಾಕಿದ ಲೇಖಕರು, ಆ ಕಾರ್ಯ ಮಾಡಬೇಕೆಂದು ಮುಂದಿನ ಸಂಶೋಧಕರಲ್ಲಿ ನಿವೇದಿಸಿಕೊಳ್ಳುತ್ತಾರೆ.

ಮಹಾದೇವಿಯಕ್ಕನ ಚರಿತ್ರೆ ಬರೆದವರಲ್ಲಿ ಒಬ್ಬನಾದ ಹರಿಹರನ 'ಮಹಾದೇವಿಯಕ್ಕನ ರಗಳೆ' ಕೃತಿಯಲ್ಲಿ ಅಕ್ಕನನ್ನು ಕುರಿತು ಬರುವ ಕಥಾ ಸಾರವನ್ನು ಓದುಗರ ಮುಂದಿಡುತ್ತಾರೆ. ಅನಂತರ ಈ ಕೃತಿಯನ್ನು ಕಟ್ಟಲು ಹರಿಹರನಿಗೆ ಅನೇಕ ಐತಿಹ್ಯಗಳ ಜೊತೆಗೆ ಅಕ್ಕನ ವಚನಗಳೂ ಆಧಾರವಾಗಿರಬೇಕೆಂಬ ಸಂದೇಹವನ್ನು ವ್ಯಕ್ತಪಡಿಸುವತ್ತಾರೆ. ಏಕೆಂದರೆ ಕಥಾಪುರುಷರ ವಚನಗಳನ್ನು ಸಮಯೋಚಿತವಾಗಿ ಬಳಸಿಕೊಂಡಿರುವುದಕ್ಕೆ ಅವನ ಬಸವರಾಜದೇವರ ರಗಳೆ ಮತ್ತು ನಂಬಿಯಣ್ಣನ ರಗಳೆಗಳನ್ನು ನಿದರ್ಶನವಾಗಿ ಕೊಡುತ್ತಾರೆ. ಮಹಾದೇವಿ ಸಮಯಸ್ಫೂರ್ತಿಯಿಂದ 'ಗೀತ'ಗಳನ್ನು ಹಾಡುತ್ತಿದ್ದಳೆಂಬುದನ್ನು ಹರಿಹರನು ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆಂದು ಹೇಳುತ್ತಾ ನಿದರ್ಶನಗಳನ್ನು ಕೊಡುತ್ತಾರೆ.

ಮಹಾದೇವಿಯಕ್ಕನ ವಚನಗಳನ್ನ ವಿಚಾರ ಮಾಡುತ್ತಾ ಹೋದಂತೆ, ಬೇರೆ ಬೇರೆ ಮಾತೃಕೆಗಳಲ್ಲಿ ಅವು ಬೇರೆ - ಬೇರೆ ರೂಪ ತಾಳುತ್ತವೆ. ಅದಕ್ಕೆ ಈ ಲೇಖನದಲ್ಲೇ ಸಾಕಷ್ಟು ನಿದರ್ಶನಗಳನ್ನು ಲೇಖಕರು ಕೊಡುತ್ತಾರೆ. ಹೀಗಾಗಿ ಅಕ್ಕನ ವಚನಗಳನ್ನು ''ಶಾಸ್ತ್ರೀಯ ರೀತಿಯಲ್ಲಿ ಪರೀಕ್ಷಿಸಿ, ವಿಮರ್ಶಿಸಿ, ಅದರಲ್ಲಿರುವ ಪ್ರಕ್ಷೇಪಗಳನ್ನು ತಿದ್ದುಪಾಡುಗಳನ್ನು ಅಸಂಗತಗಳನ್ನು ನಿರ್ಧರಿಸಬೇಕು. ವಚನಗಳ ಶುದ್ಧಪಾಠವನ್ನು ಆಧಾರ ಸಹಿತವಾಗಿ ಪ್ರಕಟಿಸಬೇಕು''[೧೦] ಆಗ ಮಾತ್ರಾ ಮಹಾದೇವಿಯಕ್ಕನ ವಚನಗಳ ಭಾಷೆ, ಶೈಲಿಗಳು, ಅವಳ ವ್ಯಕ್ತಿತ್ವ ಜೀವನವೃತ್ತಾಂತಗಳನ್ನು ಕುರಿತು ಅಭಿಪ್ರಾಯ ವ್ಯಕ್ತಪಡಿಸಲು ಸಾಧ್ಯ ಎಂಬ ಹಾರೈಕೆಯೊಂದಿಗೆ, ಸಲಹೆಯೊಂದಿಗೆ, ಲೇಖಕರು ತಮ್ಮ ಲೇಖನವನ್ನು ಮುಕ್ತಾಯಗೊಳಿಸುತ್ತಾರೆ.

---

೯. ತಿ.ನಂ.ಶ್ರೀ : ಕಾವ್ಯ ಸಮೀಕ್ಷೆ, ಕಾವ್ಯಾಲಯ ಪ್ರಕಾಶನ, ೨೦೦೫-೦೬, ಪುಟ ೮೧
೧೦. ಅದೇ ಪುಟ ೯೬

# ಆದಿಕವಿ ವಾಲ್ಮೀಕಿ

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಅನೇಕ ಸಭೆ-ಸಮಾರಂಭಗಳಲ್ಲಿ ರಾಮಾಯಣ ವಿಷಯವಾಗಿ ಉಪನ್ಯಾಸ ಮಾಡಿದ್ದರು. ಆ ಎಲ್ಲಾ ಸಂದರ್ಭದಲ್ಲಿ ವಾಲ್ಮೀಕಿ ಕುರಿತಂತೆ ಗ್ರಂಥವೊಂದರ ಅವಶ್ಯಕತೆ ಕಂಡುಬಂದು 'ಆದಿಕವಿ ವಾಲ್ಮೀಕಿ'ಯನ್ನು ಬರೆದುದಾಗಿ ತಮ್ಮ ಮೊದಲ ಮಾತಿನಲ್ಲಿ ಹೇಳಿಕೊಳ್ಳುತ್ತಾರೆ. ಈ ಕೃತಿಯು ಹದಿನಾರು ಪುಟ್ಟ ಪುಟ್ಟ ಅಧ್ಯಾಯಗಳನ್ನು ಒಳಗೊಂಡಿದೆ.

ಆದಿಕವಿ ವಾಲ್ಮೀಕಿಯಿಂದ ರಚಿತವಾದ 'ರಾಮಾಯಣ'ವು ನಮ್ಮ ದೇಶದ ಪ್ರಾಚೀನ ಗ್ರಂಥಗಳಲ್ಲಿ ಅಗ್ರಸ್ಥಾನದಲ್ಲಿರುವುದಲ್ಲದೆ, ಆದಿಕಾವ್ಯವೂ ಆಗಿದೆ. ವಾಲ್ಮೀಕಿ ಈ ಕಥೆಯನ್ನು ಹೇಳಿದ ದಿನದಿಂದ ಇಂದಿನವರೆಗೆ ಎಲ್ಲಾ ದೇಶ ಭಾಷೆಗಳಲ್ಲಿ, ಸಾವಿರಾರು ಕವಿಗಳು ತಮ್ಮ ದೃಷ್ಟಿಕೋನದಿಂದ ರಾಮಾಯಣದ ಕಥೆಯನ್ನು ಸೃಜಿಸಿದರೂ ರಾಮಾಯಣದ ಕಥೆ ವಾಲ್ಮೀಕಿಯ ಬಾಯಲ್ಲಿ ಬಂದದಕ್ಕಿಂತ ಚೆನ್ನಾಗಿ ಬೇರೆಲ್ಲೂ ಬಂದಿಲ್ಲ. ಕೇವಲ ಕಾಲದ ದೃಷ್ಟಿಯಿಂದ ಮಾತ್ರವಲ್ಲದೆ ಯೋಗ್ಯತೆಯಿಂದಲೂ 'ಆದಿಕಾವ್ಯ' ಎಂಬ ಬಿರುದಿಗೆ ರಾಮಾಯಣ ನಿಸ್ಸಂಶಯವಾಗಿ ಅರ್ಹವಾಗಿದೆ. ಈ ಸಂದರ್ಭದಲ್ಲಿ ''ಕವಿತೆಯ ಶಾಕೆಯನ್ನೇರಿ ರಾಮ ರಾಮ ಎಂದು ಮಧುರವಾಗಿ ಮಧುರಾಕ್ಷರವಾಗಿ ನುಡಿಯುತ್ತಿರುವ ವಾಲ್ಮೀಕಿಯೆಂಬ ಕೋಕಿಲಕ್ಕೆ ವಂದನೆ''[೧] ಎಂದು ಪೂರ್ವ ಕಾವ್ಯ ಪ್ರೇಮಿಯೊಬ್ಬನು ಕವಿಯನ್ನು ಪೂಜಿಸಿರುವುದನ್ನು ಲೇಖಕರು ಇಲ್ಲಿ ನೆನಸಿಕೊಳ್ಳುತ್ತಾರೆ.

ವಾಲ್ಮೀಕಿ ಕಾವ್ಯರಚಿಸಿದ ಕಾಲದಲ್ಲಿ ಕಾವ್ಯ ಮತ್ತು ಮತ ಒಂದು ಆಗಿತ್ತು. ನಾವಿಂದು ಕಾವ್ಯಕ್ಕೆ ಧರ್ಮದ ಆರೋಪ ಮಾಡುತ್ತೇವೆ. ಕಾವ್ಯಕ್ಕೆ ತನ್ನದೇ ಆದ ಧರ್ಮವೊಂದಿದೆ ಎಂಬುದನ್ನು ಮರೆಯುತ್ತೇವೆ. 'ರಾಮಾಯಣ'ದ ವಿಷಯದಲ್ಲೂ ಅಷ್ಟೇ. ನಾವದನ್ನು ಧಾರ್ಮಿಕ ಕಾವ್ಯ ಎಂದೇ ಭಾವಿಸುತ್ತೇವೆ. ಈ ರೀತಿಯಿಂದ ಕವಿಗೂ, ಕಾವ್ಯಕ್ಕೂ ಒಂದು ರೀತಿಯಲ್ಲಿ ಗೌರವ ಒದಗುತ್ತದೆ. ಹೇಗೆಂದರೆ ರಾಮಾಯಣ ನಮಗೆ ಪಾರಾಯಣ ಗ್ರಂಥವಾಗಿದೆ. ರಾಮನನ್ನು ದೇವರೆಂದು ಪೂಜೆಗೆ ಒಳಪಡಿಸಿದ್ದೇವೆ. ಇದರಿಂದ ಕೃತಿಯಲ್ಲಿ ಯಾವ ವಿಧದ ದೋಷವನ್ನು ಗುರುತಿಸುವುದು ದೈವದ್ರೋಹವೆಂದು ಬಗೆಯುತ್ತೇವೆ. ಹೀಗೆ ಗೌರವಕ್ಕೆ ಪಾತ್ರನಾದ ಇದೇ ಕೃತಿ ಅನ್ಯಮತೀಯರಿಗೆ ಅನಾದರಣೆ ಹುಟ್ಟಿಸುವುದು ಸಹಜವಾಗಿದೆ. ಲೋಕಗಳಲ್ಲಿ ಪ್ರಚಾರವಾಗಬೇಕಾದ ವಸ್ತು ಧರ್ಮ ಅಥವಾ ಮತೀಯ ಹಿನ್ನಲೆಯಲ್ಲಿ ಒಂದು ಜನಾಂಗಕ್ಕೆ ಮಾತ್ರ ಬೇಕಾದ ವಸ್ತುವಾಗುತ್ತದೆ ಎಂದು ವಿವರಿಸುವ ಲೇಖಕರು ''ಕಾವ್ಯದ ಪ್ರಚಾರದ ಸಂಕೋಚನದಿಂದ, ಬಹುಜನಕ್ಕೆ ಉಪಯೋಗವಾಗುವ ವಸ್ತು ಕೊಂಚ ಜನದ ಆಸ್ತಿಯಾಗಿ, ಅದರ ಯೋಗ್ಯತೆಗೆ ಅನುಗುಣವಾದಷ್ಟು ಉಪಯುಕ್ತವಾಗದೆ ಹೋಯಿತು. ಇದು ಕವಿಯ ಮತ್ತು ಕಾವ್ಯದ ದೃಷ್ಟಿಯಿಂದ ಹೇಗೆ

---

೧. ಮಾಸ್ತಿ ವೆಂಕಟೇಶ ಅಯ್ಯಂಗಾರ್: ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೧.

ನಷ್ಟವೋ ಹಾಗೆ ಲೋಕದ ದೃಷ್ಟಿಯಿಂದಲೂ ನಷ್ಟವೇ''[೨] ಎಂದು ಬೇಸರ ವ್ಯಕ್ತಪಡಿಸುತ್ತಾರೆ. ಬಹುಶಃ ಈ ಕಾರಣದಿಂದಲೇ ಭರತ ವರ್ಷದ ಆದಿಕಾವ್ಯ ಎಷ್ಟು ಜನರನ್ನು ಮುಟ್ಟಬಹುದಿತ್ತೋ ಅವರನ್ನೆಲ್ಲಾ ಮುಟ್ಟಲು ಸಾಧ್ಯವಾಗಲಿಲ್ಲ. ಇದರಿಂದ ಕವಿಗೆ, ಕಾವ್ಯದ ಧರ್ಮಕ್ಕೆ, ಜನಕ್ಕೆ ಅಪಾರವಾದ ನಷ್ಟವುಂಟಾಯಿತೆಂದು ಲೇಖಕರು ಅಭಿಪ್ರಾಯಪಡುತ್ತಾರೆ.

ಕಾವ್ಯಕ್ಕೆ ತನ್ನದೇ ಆದ ಧರ್ಮವಿರುವುದೆಂಬುದನ್ನು ಹಿಂದೆ ಹೇಳಿದೆ. ಆ ದೃಷ್ಟಿಯಿಂದ ನಾವು ರಾಮನನ್ನು ಕಾವ್ಯದ ನಾಯಕನೆಂದು ಎಣಿಸಬೇಕೆ ಹೊರತು ದೇವರ ಅವತಾರವೆಂಬ ಭಾವನೆ ತಾಳಬಾರದು. ವಾಲ್ಮೀಕಿ ರಾಮನನ್ನು ವಿಷ್ಣುವಿನ ಅವತಾರ ಎಂದು ಹೇಳಿ, ಅದೇ ಶ್ಲೋಕದಲ್ಲಿ ರಾಮಚಂದ್ರ ತನ್ನನ್ನು ತಾನು ಬರಿಯ ಮನುಷ್ಯನೆಂದು ತಿಳಿದಿದ್ದೇನೆಂದು ಹೇಳುತ್ತಾನೆ. ಒಟ್ಟು ದೃಷ್ಟಿಯಲ್ಲಿ ''ರಾಮಚಂದ್ರನು ಮನುಷ್ಯನಾಗಿ ಬಂದ ದೇವರು ಎಂದು ತಿಳಿಯುವುದಕ್ಕೆ ಪ್ರತಿಯಾಗಿ ನಡತೆಯಿಂದ ದೇವರಾದ ಮನುಷ್ಯ ಎಂದು ಅರಿತೆವು''[೩] ಎಂದು ಲೇಖಕರು ಹೇಳಿ ಅದು ಕವಿಯ ಉದ್ದೇಶವಾಗಿದೆ ಎಂದು ಅಭಿಪ್ರಾಯಪಡುತ್ತಾರೆ.

ವಾಲ್ಮೀಕಿ ರಾಮಾಯಣವನ್ನು ರಚಿಸಲು ಕಾರಣವಾದ ಹಿನ್ನಲೆ, ಸ್ಫೂರ್ತಿ ಮತ್ತು ಪರಿಣಾಮಗಳನ್ನು ಲೇಖಕರು ಸಂಕ್ಷಿಪ್ತವಾಗಿ ಕೊಡುತ್ತಾರೆ. ಅನಂತರ ಅವರು ಹೇಳುವ ಮಾತುಗಳು ಗಮನಾರ್ಹ. ಲೇಖಕರು ಹೇಳುವಂತೆ ವಾಲ್ಮೀಕಿ ತನ್ನ ರಾಮಾಯಣವನ್ನು ಬಾಲಕಾಂಡದ ಐದನೆಯ ಸರ್ಗದಿಂದ ಪ್ರಾರಂಭ ಮಾಡಿದ್ದಾನೆ. ಮೊದಲ ನಾಲ್ಕು ಸರ್ಗಗಳನ್ನು ಯಾರೋ ಬರೆದು ಸೇರಿಸಿರಬೇಕೆಂದು ಲೇಖಕರು ಸಂಶಯ ಪಡುತ್ತಾರೆ. ಮೊದಲನೆಯ ಸರ್ಗದಲ್ಲಿ ನಾರದನು ವಾಲ್ಮೀಕಿಗೆ ರಾಮಾಯಣದ ಕಥೆ ಹೇಳಿದನೆಂದು, ಮೂರನೆಯ ಸರ್ಗದಲ್ಲಿ ವಾಲ್ಮೀಕಿ ಧ್ಯಾನದಿಂದ ಕವಿತೆಯನ್ನು ವಿವರವಾಗಿ ಬರೆದನೆಂದು, ನಾಲ್ಕನೆಯದರಲ್ಲಿ ಆ ಕಥೆಯನ್ನು ಕುಶೀಲರು ಕಲಿತು ರಾಮನೆದುರು ಹಾಡಿದರೆಂದು ಯಾರೋ ಬರೆದು ಸೇರಿಸಿರಬಹುದು, ಎರಡನೆಯ ಸರ್ಗವನ್ನು ಕವಿಯ ಶಿಷ್ಯನಾದ ಭರದ್ವಾಜನೋ, ಅವನ ಇಷ್ಟರೋ ಬರೆದಿರಬೇಕು. ಏಕೆಂದರೆ ಕ್ರೌಂಚ ಮಿಥನದ ಸಂಗತಿಯನ್ನು ಪ್ರತ್ಯಕ್ಷವಾಗಿ ತಿಳಿದಿದ್ದು ಭರದ್ವಾಜನಿಗೆ. ಆದ್ದರಿಂದ ಅವನೇ ಬರೆದಿರಬೇಕು. ಆದರೆ ಈ ಸಂದರ್ಭದಲ್ಲಿ ಹಲವು ಅಸಂಬದ್ಧವಾದ ಮಾತುಗಳು ಬಂದಿರುವುದರಿಂದ, ಭರಧ್ವಾಜನಿಂದ ಕತೆ ಕೇಳಿದ ಯಾರೋ ಬರೆದಿರಬೇಕೆಂಬ ಊಹೆಯನ್ನು ಮಾಸ್ತಿಯವರು ವ್ಯಕ್ತಪಡಿಸಿದ್ದಾರೆ. ಒಟ್ಟನಲ್ಲಿ ಕಥೆಯಲ್ಲಿ ಕಾಣುವ ಕವಿತಾವಿಷಯವಾದ ಭಾವನೆ ಸುಂದರವಾಗಿದೆ. ಈ ಭಾವ ನೋವಿನಿಂದ ಬಂದಿತು. ಈ ನೋವಿಗೆ ರೂಪವನ್ನು ಕೊಡುವ ಮಾತೇ ಕಾವ್ಯವಾಯಿತು ಎಂದು ಹೇಳುವ ಸಂದರ್ಭದಲ್ಲಿ ''ಆ ಮಾತು ಸಾವಧಾನವಾಗಿ ಯೋಚಿಸಿ ಕಟ್ಟಿ ಹೇಳಿದ ಮಾತಲ್ಲ. ಭಾವ ಉಕ್ಕಿ ಮಾತಾಗಿ ಹೊರಹೊಮ್ಮಿತು. ಬಲ್ಲವನ ಬಾಯಲ್ಲಿ ಬಂದ ಅಂಥ ಮಾತಿನಲ್ಲಿ ಸಾವಧಾನವಾಗಿ ಕಟ್ಟಿದರೆ ಮಾತ್ರ ಬರಬಹುದೆನ್ನಿಸುವಂತಹ ನಿಯಮವಿಧೇಯತೆ

---

೨. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೩.
೩. ಅದೇ ಪುಟ ೫

ಕಾಣುತ್ತದೆ''[೪] ಎನ್ನುತ್ತಾರೆ. ಲೇಖಕರು ಇನ್ನೊಂದು ವಿಷಯದ ಕಡೆಗೆ ಓದುಗರ ಗಮನವನ್ನು ಸೆಳೆಯುತ್ತಾರೆ. ರಾಮಾಯಣವನ್ನು ರಚಿಸಲು ಕಾರಣವಾದ ಕ್ರೌಂಚ ಪಕ್ಷಿಯ ರೋಧನ ಒಂದು ಸಾಮಾನ್ಯ ಸಂಗತಿ. ಕ್ರೌಂಚ ಪಕ್ಷಿಗಳಲ್ಲಿ ಒಂದನ್ನು ವ್ಯಾಧನೊಬ್ಬ ಕೊಂದನು ಎಂಬುದು ದೊಡ್ಡ ವಿಷಯವಲ್ಲ. ವ್ಯಾಧನು ಅವನ ವೃತ್ತಿಯನ್ನು ಮಾಡಿದ್ದಾನಷ್ಟೆ ಎನ್ನಬಹುದು. ಇದು ಸಾಮಾನ್ಯನಿಗೆ ಆಗುವ ಅನುಭವ. ಆದರೆ ಉತ್ತಮ ಸಂವೇದನೆಯನ್ನು ಹೊಂದಿದ ವಾಲ್ಮೀಕಿಗೆ ನೊಂದದ್ದು ಹಕ್ಕಿಯಾದರೇನು? ಮನುಷ್ಯನಾದರೇನು? 'ಜೀವ'ದ ವಿಷಯದಲ್ಲಿ ಸಣ್ಣದು ದೊಡ್ಡದಿಲ್ಲ ಎಂಬ ನಿಲುವು ತಾಳಿ, ಯಾವ ನೋವಾದರೂ ವಿಶ್ವದ ಜೀವನವು ಅನುಭವಿಸುವ ಒಂದು ನೋವು ಎಂದು ನಿರ್ಧರಿಸಿ, ಆಡಿದ ಮಾತು ಆಗ್ರಹವಾದರೂ ಬ್ರಹ್ಮನ ಅನುಗ್ರಹ ಪಡೆದು ಕಾವ್ಯದ ಮೊದಲ ಮಾತಾಗುವಂತೆ ಮಾಡಿದನು. ಹೀಗೆ ಚರ್ಚಿಸುತ್ತಾ ಹೋಗುವ ಲೇಖಕರು ಕೃತಿ ನಿರ್ಮಾಣಕ್ಕೆ ಸಹಾಯಕವಾದ ಪ್ರಕೃತಿ ಮತ್ತು ಕವಿ ಪ್ರತಿಭೆಯ ಬಗೆಗೆ ಬರೆಯುತ್ತಾರೆ.

ರಾಮಾಯಣದಂತಹ ಮಹಾಕಾವ್ಯದಲ್ಲಿ ಪ್ರಕ್ಷಿಪ್ತ ಭಾಗಗಳಿವೆ ಎಂಬುದನ್ನು ಒಪ್ಪಿದರೂ, ಯಾವುದೂ ಪ್ರಕ್ಷಿಪ್ತ ಎಂಬುದರಲ್ಲಿ ಮತಬೇಧವಿದೆ. ಹೀಗಾಗಿ ಲೇಖಕರು ಕೆಲವಾರು ಪ್ರಕ್ಷಿಪ್ತಗಳನ್ನು ಕೊಟ್ಟಿದ್ದಾರೆ. ದಶಶಿರನ ವಧೆಯಾಗಿ ರಾಮನ ಪಟ್ಟಾಭಿಷಕದೊಂದಿಗೆ ವಾಲ್ಮೀಕಿ ಕಥೆಯನ್ನು ಮುಗಿಸುತ್ತಾನೆ. ಅನಂತರದ ಉತ್ತರಕಾಂಡ ಪ್ರಕ್ಷೇಪವಾಗಿದೆ ಎಂಬುದು ಲೇಖಕರ ಅಭಿಪ್ರಾಯ. ಏಕೆಂದರೆ ನಾರದನು ರಾಮನ ಚರಿತೆಯನ್ನು ವಾಲ್ಮೀಕಿಗೆ ಹೇಳಿದಾಗ ಉತ್ತರಕಾಂಡ ನಡೆದಿರಲಿಲ್ಲ ಎಂಬುದು ಲೇಖಕರ ವಾದ. ಅಲ್ಲದೆ ಬಾಲಕಾಂಡದ ಆರಂಭದ ನಾಲ್ಕು ಸರ್ಗಗಳ ಋಷ್ಯಶೃಂಗ ವೃತ್ತಾಂತ ಪ್ರಕ್ಷಿಪ್ತವಾಗಿರುವುದನ್ನು ಶ್ಲೋಕಗಳು ಸರಿಯಾಗಿ ಅಚ್ಚುಗೊಂಡಿಲ್ಲದಿರುವುದರಿಂದ ಇಲ್ಲಿ ಬರುವ ಕಥೆ ಬೇರೊಬ್ಬರು ಬರೆದು ಸೇರಿಸಿರುವುದಾಗಿದೆ. ''ಸಗರನ ಕಥೆ, ವಶಿಷ್ಟ ವಿಶ್ವಾಮಿತ್ರರ ಕಲಹದ ಕಥೆ, ಪರಶುರಾಮನ ಕಥೆ, ಕಾಕಾಸುರನ ಕಥೆ, ಇವೂ ಪ್ರಕ್ಷಿಪ್ತವೆಂದೇ ಕಾಣುತ್ತದೆ. ಹೀಗೆಯೇ ಅಲ್ಲಲ್ಲಿ ಅಧಿಕ ಪಾಠ ಸರ್ಗಗಳಿವೆ ಗಯೆ ಮೊದಲಾದ ಸ್ಥಳಗಳ ಮಹಿಮೆಯ ವರ್ಣನೆಯಿದೆ. ರಾಮನು ಭರತನನು ಪ್ರಶ್ನೆ ಮಾಡುವ ನೆಪದಿಂದ ಇಲ್ಲಿ ಸೇರಿಕೊಂಡಿರುವ ರಾಜನೀತಿ ಸರ್ಗದ ತೆರದೊಂದು ಅಧ್ಯಾಯ ಮಹಾಭಾರತದ ಸಭಾ ಪರ್ವದಲ್ಲಿ ದೊರೆಯುತ್ತದೆ''[೫]. ಅಲ್ಲಿ ನಾರದ ಯುಧೀಷ್ಠರನಿಗೆ ಹೇಳಿದ ಈ ಭಾಗ ರಾಮಾಯಣದಲ್ಲಿ ದೊರೆಯುವುದು ಬಹು ಅಪ್ರಸುತ್ತವಾಗಿದೆ ಎಂಬ ತೀರ್ಮಾನಕ್ಕೆ ಲೇಖಕರು ಬರುತ್ತಾರೆ. ಹಾಗೆಂದ ಮಾತ್ರಕ್ಕೆ ಕೃತಿಯು ವಾಲ್ಮೀಕಿಯದಲ್ಲ ಎಂಬ ಭಾವವಲ್ಲ. ಕಾವ್ಯ ಜೀವ ಸೇವೆಯ ಭಾಗ ವಾಲ್ಮೀಕಿಯದೇ ಆಗಿದೆ. ರಾಮಾಯಣದ ಮಹಿಮೆಯಿರುವುದು, ರಸಾನುಭವದ ಶಿಖರವಿರುವುದೂ ಈ ಭಾಗದಲ್ಲಿ ಎಂಬುದು ಲೇಖಕರ ಅಭಿಪ್ರಾಯ. ಹೀಗೆ ರಾಮಾಯಣದಲ್ಲಿರಬಹುದಾದ ಪ್ರಕ್ಷಿಪ್ತಗಳನ್ನು ನಿದರ್ಶನಗಳೊಂದಿಗೆ ವಿವರಿಸಿ, ವಾಲ್ಮೀಕಿಯಿಂದ

---

೪. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೧೦

೫. ಅದೇ ಪುಟ ೧೫

ರಚನೆಗೊಂಡ ಕಾವ್ಯದ ಸತ್ವವನ್ನು ತಿಳಿಯುವಲ್ಲಿ ಪ್ರಾಮಾಣಿಕ ಪ್ರಯತ್ನವನ್ನು ಮಾಡಿರುವ ಲೇಖಕರನ್ನು ನಾವು ಮೆಚ್ಚಿಕೊಳ್ಳಬಹುದು.

ವಾಲ್ಮೀಕಿ ತನ್ನ ಕಾವ್ಯವನ್ನು ''ಸರ್ವಾಪೂರ್ವಮಿಯಂ ಯೇ ಷಾಂ ಆಸೀತ್ ಕೃತ್ಸ್ನಾ ವಸುಂದರಾ''[೬] ಎಂಬ ಶ್ಲೋಕದಿಂದ ಆರಂಭಿಸಿರುವುದನ್ನು ಲೇಖಕರು ಖಚಿತಪಡಿಸುತ್ತಾರೆ. ವಾಲ್ಮೀಕಿಯಿಂದ ರಚನೆಗೊಂಡ 'ಬಾಲಕಾಂಡ' 'ಅಯೋಧ್ಯಾಕಾಂಡ', 'ಅರಣ್ಯಕಾಂಡ', 'ಸುಂದರಕಾಂಡ', 'ಕಿಷ್ಕಿಂದಾಕಾಂಡ' ಮತ್ತು 'ಯುದ್ಧಕಾಂಡ'ಗಳೆಂಬ ಆರು ಕಾಂಡಗಳನ್ನು ಹೆಸರಿಸಿ, ಅವುಗಳಲ್ಲಿ ವಿಷಯದ ದೃಷ್ಟಿಯಿಂದ, ರಸ ಉಕ್ಕಿ ಕಾವ್ಯ ಸರಸ್ಸನ್ನು ತುಂಬಿರುವ ದೃಷ್ಟಿಯಿಂದ 'ಅಯೋಧ್ಯಾಕಾಂಡ'ವೇ ಹೆಚ್ಚು ಶ್ರೇಷ್ಠವಾದುದು ಎಂಬ ತೀರ್ಮಾನಕ್ಕೆ ಲೇಖಕರು ಬರುತ್ತಾರೆ. ಇದು ನಿಜವೂ ಹೌದು.

ಮೊದಲೇ ಹೇಳಿದಂತೆ ವಿಸ್ತಾರವಾದ ದೃಷ್ಟಿಯಿಂದ 'ಯುದ್ಧಕಾಂಡ' ಎಲ್ಲದಕ್ಕಿಂತ ದೊಡ್ಡದಾದರೂ, ವಿಷಯದ ದೃಷ್ಟಿಯಿಂದ 'ಯುದ್ಧಕಾಂಡ'ವು ಅಯೋಧ್ಯಾಕಾಂಡಕ್ಕಿಂತ ಕಿರಿದಾಗುತ್ತದೆ. 'ಅಯೋಧ್ಯಾಕಾಂಡ'ದ ಎಲ್ಲ ಸರ್ಗದಲ್ಲಿಯೂ ಭಾವುಕತೆಯಿಂದ ಮತ್ತು ಸಂಗತಿಗಳಿಂದ ಈ ಕಾಂಡ ತುಂಬಿದೆ. ವಾಲ್ಮೀಕಿ ಎಷ್ಟು ಹಿರಿಯ ಕವಿ ಎಂಬುದನ್ನು ತಿಳಿಯಬೇಕಾದರೆ ಈ ಕಾಂಡವನು ಓದಿದರೆ ಸಾಕು. ಅಲ್ಲದೆ ಇದು ರಾಮಾಯಣವೆಂಬ ಕಾವ್ಯಸೌಧದ ಮಧ್ಯಭಾಗವಾಗಿರುವುದೆಂದು ಲೇಖಕರು ಗುರುತಿಸಿದ್ದಾರೆ. ಹೀಗಾಗಿ 'ಅಯೋಧ್ಯಾಕಾಂಡ'ದ ಉಪಶೀರ್ಷಿಕೆಗಳನ್ನು ಕೊಟ್ಟು ವಿವರಿಸುತ್ತಾರೆ. ದಶರಥನಿಗೆ ಮೂವರು ಪತ್ನಿಯರಿದ್ದರೂ, ಅವರಲ್ಲಿ ಪರಸ್ಪರ ಭಿನ್ನಾಭಿಪ್ರಾಯವಿತ್ತು. ಸುಮಿತ್ರೆ ನಿಶ್ಚಲವಾಗಿದ್ದರೆ, ಕೌಸಲ್ಯೆ ತಾನು ಹಿರಿಯಳೆಂಬ ಅಭಿಮಾನ, ಕೈಕೆಯಿಗೆ ತಾನು ರಾಜನ ಪ್ರೇಮರಾಣಿ ಎಂಬ ದುರಾಭಿಮಾನವಿತ್ತೆಂದು ಲೇಖಕರು ಹೇಳುತ್ತಾರೆ. ಅಷ್ಟೇ ಅಲ್ಲ ಒಬ್ಬೊಬ್ಬ ರಾಣಿಗೆ, ಅವರದೇ ಆದ ಸೇವಕರಿದ್ದು ಒಬ್ಬ ರಾಣಿಯ ಸೇವಕ ಇನ್ನೊಬ್ಬ ರಾಣಿಯನ್ನು ಆಶ್ರದ್ಧೆಯಿಂದ ಕಾಣುವುದನ್ನು, ಸಮಯ ಸಿಕ್ಕಾಗ ಹೀನಾಯವಾಗಿ, ಅಪಹಾಸ್ಯ ಮಾಡುವುದನ್ನು ವಾಲ್ಮೀಕಿ ತನ್ನ ಕಾವ್ಯದಲ್ಲಿ ವಿಸ್ತಾರವಾಗಿ ಹೇಳಿಲ್ಲ. ಇದಕ್ಕೆ ಕಾರಣವೇನೆದಂರೆ ವಾಲ್ಮೀಕಿ ರಾಮಾಯಣವನ್ನು ಬರೆದಾಗ ಈ ರಾಣಿಯರೆಲ್ಲ ಜೀವಂತರಾಗಿದ್ದರೆಂದೂ, ಮರೆತುಹೋದ ವಿಷಯವನ್ನು ಮತ್ತೆ ಕೆದುಕುವುದು ರಾಮನಿಗೆ ಮೆಚ್ಚುಗೆಯಾಗುತ್ತಿರಲಿಲ್ಲವೆಂದು ವಾಲ್ಮೀಕಿ, ದಶರಥನ ಪೆಂಡವಾಸದ ಪರಸ್ಪರ ಅಸಹನೆ ವೈಮನಸ್ಸುಗಳನ್ನು ಲಂಬವಾಗಿ ವರ್ಣಿಸದೆ, ಎಷ್ಟರಮಟ್ಟಿಗೆ ಬೇಕೋ ಅಷ್ಟನ್ನು ಮಾತ್ರ ಅಯೋಧ್ಯಾಕಾಂಡದಲ್ಲಿ ಸೂಚಿಸಿ ಮುಂದುವರಿದಿರುವನೆಂದು ಅಭಿಪ್ರಾಯ ಪಡುತ್ತಾರೆ ತನ್ನ ಮಗ ಯುವರಾಜನಾಗುವನೆಂಬ ಸಂತೋಷದಿಂದ ನಲಿಯುತ್ತಿದ್ದ ಕೌಸಲ್ಯೆ ಮಗನನ್ನು ''ರಾಮಾ ಬಹುಕಾಲ ಬಾಳು ನಿನ್ನ ಪರಿಪಂಥಿಗಳು ಹತರಾದರು, ಐಶ್ವರ್ಯಯುಕ್ತನಾಗಿ ನೀನು ನನ್ನ ಮತ್ತು ಸಮಿತ್ರೆಯ ಬಂಧುಗಳನ್ನು

---

೬. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೧೮.

ಸಂತೋಷಗೊಳಿಸು''[೭] ಎಂದು ಹೇಳುತ್ತಾಳೆ ಕೈಕೆಯಿಯ ಬಂಧುಗಳನ್ನು ಸಂತೋಷಗೊಳಿಸು ಎಂಬ ಮಾತು ಬರುವುದಿಲ್ಲ. ಈ ಕಾರಣದಿಂದ ಕೌಸಲ್ಯೆ ದೃಷ್ಟಿಯಲ್ಲಿ ರಾಮನಿಗೆ ಹಗೆಯಾಗಿದ್ದವರು ಪ್ರಾಯಶಃ ಕೈಕೆಯಿ ಮತ್ತು ಅವಳ ಬಂಧುಗಳು ಎಂದು ನಾವು ಊಹಿಸಲು ಸಾಧ್ಯವಿದೆ ಎಂದು ಲೇಖಕರು ಹೇಳುತ್ತಾರೆ. ಅನಂತರದಲ್ಲಿ ಕೈಕೆಯಿ ವರಬೇಡಿದ ಕಥೆ, ಕೌಸಲ್ಯೆಯ ವಿಲಾಪ, ಸೀತಾರಾಮ, ಲಕ್ಷ್ಮಣರ ಪ್ರಯಾಣ, ದಶರಥನ ಮರಣ, ಭರತನ ಕೋಪ ಎಂಬ ಉಪಶೀರ್ಷಿಕೆಗಳನ್ನು ಕೊಟ್ಟು, ಕಥಾಭಾಗವನ್ನು ವಿಶ್ಲೇಷಿಸುತ್ತಾರೆ.

ಲೇಖಕರು ಮುಂದಿನ ಭಾಗದಲ್ಲಿ ರಾಮಾಯಣದ ಕಥೆಯ ಪಾತ್ರಗಳ ಪರಿಶೀಲನೆಯ ಕಾರ್ಯವನ್ನು ಕೈಗೊಂಡಿದ್ದಾರೆ. ಈ ಕಾವ್ಯವು ಮಾನವ ಜೀವನವನ್ನು ಕುರಿತು ಭಾವವಾಗಿದ್ದು, ಆ ಜೀವನದ ಬಯಲಾಟವನ್ನು ವಾಲ್ಮೀಕಿ ಅಯೋಧ್ಯಾಕಾಂಡದಲ್ಲಿ ತೆರೆದಿರುವಷ್ಟು ವಿಸ್ತಾರವಾಗಿ ಪ್ರಪಂಚದ ಸಾಹಿತ್ಯದ ಯಾವ ಕಾವ್ಯವೂ ತೆರೆದಂತೆ ಕಾಣುವುದಿಲ್ಲ ಎನ್ನುತ್ತಾರೆ. ಕಥೆಯಲ್ಲಿ ರಾಜ ಮತ್ತು ಆತನ ಮೂವರು ರಾಣಿಯರು ಒಂದೊಂದು ಸ್ವಭಾವದವರು. ಅವರ ನಾಲ್ವರು ಮಕ್ಕಳೂ ಒಂದೊಂದು ಸ್ವಭಾವದವರು. ಇಷ್ಟೊಂದು ಬೇರೆ ಬೇರೆ ಸ್ವಭಾವದ ಪಾತ್ರಗಳು, ಇಷ್ಟೊಂದು ಸಂದರ್ಭಗಳಲ್ಲಿ ಚಿತ್ರಿತವಾಗಿರುವುದು ಭಾರತದ ಇತಿಹಾಸದಲ್ಲಿ ಹೊರತು ಇನ್ನೆಲ್ಲಿಯೂ ಇಲ್ಲ ಎಂದು ಲೇಖಕರು ಆಶ್ಚರ್ಯವ್ಯಕ್ತಪಡಿಸುತ್ತಾರೆ.

ಮುಂದೆ ಕಥೆಯ ಮುಖ್ಯ ಪಾತ್ರಧಾರಿಗಳ ಸ್ವಭಾವವನ್ನು ವಿವೇಚಿಸುತ್ತಾರೆ. ವಾಲ್ಮೀಕಿ ಮನುಷ್ಯರ ಸ್ವಭಾವವನ್ನು ತಿಳಿದಿರುವ ರೀತಿ ಅದನ್ನು ಚಿತ್ರಿಸುವ ಸರಿ ಅದ್ಭುತವಾದದ್ದು. ಅವನ ಕಥೆಯ ಪಾತ್ರಗಳಲ್ಲಿ ಯಾವುದನ್ನು ತೆಗೆದುಕೊಂಡರೂ ಇದು ಸ್ಪಷ್ಟವಾಗಿ ಕಾಣುತ್ತದೆ. ರಾಮನು ಕಾಡಿಗೆ ಹೋಗುವ ಸಂದರ್ಭದಲ್ಲಿ ತಂದೆತಾಯಿಗಳು ರಥದ ಹಿಂದೆ ಹೇಗೆ ಬಂದರೆಂದು ವಾಲ್ಮೀಕಿ ವರ್ಣಿಸಿರುವುದನ್ನು ನೋಡಿದಾಗ, ರಥದ ಹಿಂದೆ ಓಡಿಬಂದವರು ರಾಜರಾಣಿಯರಲ್ಲ, ತಂದೆ-ತಾಯಿಯರು ಎಂಬ ಭಾವ ಎಂತಹ ಕಲ್ಲೆದೆಯವನಿಗೂ ಅನಿಸದಿರದು. ಕೌಸಲ್ಯೆ ಚಿತ್ರವೂ ಸಂಪೂರ್ಣವಾದದ್ದು ಎನ್ನುತ್ತಾರೆ ಲೇಖಕರು. ಮಗನು ರಾಜನಾಗುವ ಸುದ್ದಿ ತಿಳಿದಾಗ ಉಬ್ಬಿ ಹೋಗುವ ಕೌಸಲ್ಯೆ, ತನ್ನ ಮಗನಿಗೆ ಒದಗಿದ ಸ್ಥಿತಿಯನ್ನು ತಿಳಿದು ತನಗೆ ಮಕ್ಕಳಿಲ್ಲದಿದ್ದರೆ, ಚೆನ್ನಾಗಿರುತ್ತಿತ್ತೆಂದು ಹೇಳಿಕೊಳ್ಳುತ್ತಾಳೆ. ತಂದೆಯ ಮಾತನ್ನು ನಡೆಸಬೇಕೆಂದು ಮಗನು ಕಾಡಿಗೆ ಹೊರಟಿದ್ದಾನೆ ನೆಂಬುದನ್ನು ಆ ತಾಯಿ ಹೃದಯ ತಿಳಿಯದಾಯಿತು. ತನ್ನ ಮಗನ ವನವಾಸಕ್ಕೆ, ಗಂಡನೇ ಕಾರಣವೆಂದು ಚುಚ್ಚು ಮಾತಾಡುವ, ಕೌಸಲ್ಯ, ದಶರಥನು ಕೈಮುಗಿದು ಕ್ಷಮೆ ಕೇಳಿದಾಗ ಕರಗಿದಳು. ಅವನಿಗೆ ಸಮಾಧಾನ ಮಾಡಿದಳು, ಸಾವಿನ ಹೊತ್ತಿನಲ್ಲಿ ಅವನನ್ನು ನೋಡಿಕೊಂಡಳು.

ರಾಮನ ಪಾತ್ರವನ್ನು ನೋಡಿದಾಗ ಎಲ್ಲರೂ ಅವನನ್ನು ಹೊಗಳುವರು. ಕವಿಯಂತೂ ರಾಮನನ್ನು

೭. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೩೨೩

ಆದರ್ಶ ಪುರುಷನೆಂದು ವರ್ಣಿಸುತ್ತಾನೆ. ''ಇವನ ಎಲ್ಲಾ ಗುಣಗಳನ್ನು ನೋಡಿ ಮೇಧಿನಿ ಲೋಕನಾಥ ಉಪಮನಾದ ಇವನನ್ನು ನಾಥವಾಗಿ ಅಪೇಕ್ಷಿಸಿತಂತೆ''[೮] ಎಂದು ಕವಿ ಬಣ್ಣಿಸಿದ್ದಾನೆ. ರಾಮನು ಜನರ ಸ್ವಭಾವವನ್ನರಿತು ಅವರವರಿಗೆ ಯಾವ ಮಾತು ಅನ್ವಯಿಸುತ್ತಿತ್ತೋ ಅದನ್ನು ಹೇಳುತ್ತಿದ್ದನು. ತನ್ನ ಕಷ್ಟವನ್ನು ಗಮನಿಸಿದೆ ಬೇರೆಯವರ ಕಷ್ಟಕಂಡು ಸಮಾಧಾನವಾಗುವಂತೆ ಮಾತನಾಡುವ ವಿಶಾಲ ಹೃದಯ ರಾಮನಲ್ಲಿತ್ತೆಂದು ಲೇಖಕರು ಬಣ್ಣಿಸುತ್ತಾರೆ. ರಾಮನಿಗೆ ಧರ್ಮವೇ ಮುಖ್ಯ ಅದಕ್ಕಾಗಿ ಅವನು ಕಷ್ಟಗಳನ್ನು ಅನುಭವಿಸಲು ಸಿದ್ಧನಿದ್ದನು. ಅವನು ವಿನಯವಂತನಾದರೂ ತನಗೆ ಸರಿಯೆಂದು ತೋರಿದ ದಾರಿಯನ್ನು ಬಿಡು ಎಂದು ಹಿರಿಯರು ಹೇಳಿದರು ಒಪ್ಪುತ್ತಿರಲಿಲ್ಲ.

ರಾಮನ ನಡತೆಯಲ್ಲಿ ಕೆಲವರು ಕೆಲವು ಆಕ್ಷೇಪಗಳನ್ನು ಎತ್ತಿರುವುದಕ್ಕೆ ಲೇಖಕರು ಈ ಭಾಗದಲ್ಲಿ ಸಮಾಧಾನ ಹೇಳಲು ಪ್ರಯತ್ನಿಸುತ್ತಾರೆ. ಸುಗ್ರೀವನು ತನಗೆ ಸಹಾಯ ಮಾಡುವುದಾಗಿ ಮಾತು ಕೊಟ್ಟ ಕಾರಣದಿಂದ ರಾಮನು ಮರೆಯಲ್ಲಿ ನಿಂತು ವಾಲಿಯನು ಕೊಂದನು ಎಂಬ ಆಕ್ಷೇಪ ಮುಖ್ಯವಾದುದಾಗಿದೆ. ಇದಕ್ಕೆ ಲೇಖಕರ ಸಮಾಧಾನ ಏನೆಂದರೆ ರಾಮನೇ ಕಾವ್ಯದಲ್ಲಿ ಹೇಳುವಂತೆ ವಾಲಿಯು ತಮ್ಮನನ್ನು ಕಾಡಿಗಟ್ಟಿದುದು ಮಾತ್ರವಲ್ಲದೆ, ಅವನ ಹೆಂಡತಿಯನ್ನು ಇಟ್ಟುಕೊಂಡಿದ್ದು, ಶಿಕ್ಷಾರ್ಹ ಅಪರಾಧ, ಶಿಕ್ಷೆ ನಿಯತಿಯಾದ ಮೇಲೆ ಅದನ್ನು ಹೇಗೆ ವಿಧಿಸಿದರೂ ತಪ್ಪಿಲ್ಲ ಎಂಬುದು.'' ಸುಗ್ರೀವನಿಗೆ ವಾಲಿಯಿಂದ ಅನ್ಯಾಯವಾಗಿದೆಯೆಂದು ರಾಮನಿಗೆ ನಂಬಿಕೆ ಹುಟ್ಟಿತು. ತಮ್ಮನಿಗೆ ರಾಜ್ಯ ಬೇಕೆಂದಾಗ ಒಪ್ಪಿ ಕಾಡಿಗೆ ಬಂದಿದ್ದ ರಾಮನಿಗೆ ವಾಲಿ ಬಹಳ ಧೂರ್ತನೆಂದು ಕಂಡಿತು''[೯]. ಸಾಲದ್ದಕ್ಕೆ ಅವನು ಸುಗ್ರೀವನ ಹೆಂಡತಿಯನ್ನು ಕಸಿದುಕೊಂಡಿದ್ದನು. ಪರನಾರಿಯನ್ನು ಕಣ್ಣೆತ್ತಿ ನೋಡದ ರಾಮನಿಗೆ ಇದು ಅಕ್ಷಮ್ಯವಾದ ಪಾತಕವೆಂದು ಕಂಡಿತು. ಅದಕ್ಕಾಗಿಯೇ ಅವನು ವಾಲಿಯನ್ನು ಶಿಕ್ಷಿಸುವ ವಿಷಯದಲ್ಲಿ ಹಿಂತೆಗೆಯಲಿಲ್ಲ. ಅವನು ಮಾಡಿದ ಕೆಲಸದಲ್ಲಿ ಧರ್ಮದ ಕೊರತೆ ಇತ್ತೇ ವಿನಃ ಅಧರ್ಮವಿರಲಾರದು. ರಾಮನ ನಡತೆಯಲ್ಲಿ ಇದು ಕುಂದಾಗಬಹುದಾದರು ಅವನ ಒಳ್ಳೆಯತನದ ಮೊತ್ತದಲ್ಲಿ ಇದರ ತೂಕವನ್ನು ಪರಿಗಣಿಸಬಾರದು. ಎಂಬ ಧರ್ಮಸೂಕ್ಷ್ಮದ ಸಮರ್ಥನೆಯನ್ನು ಮಾತನಾಡುತ್ತಾ, ರಾಮನು ದೇವರಾದರೆ ದೇವರು ತಪ್ಪು ಮಾಡುವುದಿಲ್ಲ ಅವನು ಮನುಷ್ಯನಾದರೆ ಅವನು ತಪ್ಪು ಮಾಡುವುದು ಸಹಜ ಎಂದೆಲ್ಲಾ ಹೇಳಿ ರಾಮನ ಪರವಾಗಿ ವಾದಿಸುವ ಲೇಖಕರ ಮಾತನ್ನು ಒಪ್ಪಲಾಗದು. ಧರ್ಮಕ್ಕಾಗಿ ಏನೆಲ್ಲಾ ಕಷ್ಟಗಳನ್ನು ಅನುಭವಿಸಲು ಸಿದ್ಧನಿರುವ ರಾಮನು 'ಯುದ್ಧಧರ್ಮ' ಇರುವುದನ್ನು ಮರೆತು ವಾಲಿಯನ್ನು ಕೊಂದಿದ್ದು ಅಧರ್ಮವೇ ಸರಿ ಎಂಬುದು ನನ್ನ ಅಭಿಪ್ರಾಯ.

---

೮. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ೧೧೭

೯. ಅದೇ ಪುಟ೧೨೪

ರಾಮನ ಮೇಲಿರುವ ಬಹುದೊಡ್ಡ ಆಕ್ಷೇಪವೆಂದರೆ ಸೀತೆಯನ್ನು ಅಗ್ನಿ ಪ್ರವೇಶ ಮಾಡಿಸಿದುದು. ರಾವಣನ ಕಪಿಮುಷ್ಠಿಯಿಂದ ಬಿಡಿಸಿಕೊಂಡು ಬಂದ ಸೀತೆಯನ್ನು ನೋಡಿ ಜನ ರಾವಣನನ್ನು ನೋಡಿ ಸೀತೆಯ ಮನಸ್ಸು ಕದಡದೇ ಇರುತ್ತದೆಯೇ ಎಂದು ಮಾತನಾಡಿಕೊಳ್ಳದಿದ್ದರೂ, ಒಂದು ವರ್ಷ ರಾವಣನ ಸಹವಾಸದಲ್ಲಿದ್ದ ಸೀತೆಯನ್ನು ಚೆಲುವೆಯೆಂಬ ಕಾರಣಕ್ಕೆ ರಾಮನು ಸ್ವೀಕರಿಸಿದನು ಎಂದು ಹಾಸ್ಯ ಮಾಡುವರು. ಇದರಿಂದ ತನ್ನ ಮನೆತನಕ್ಕೆ ಅಪಯಶಸ್ಸು ತಗುಲುತ್ತದೆಂದು ರಾಮನು ಸೀತೆಗೆ ಅಗ್ನಿ ಪ್ರವೇಶಿಸಲು ಹೇಳುತ್ತಾನೆ. ಅಲ್ಲದೆ ಸೀತೆ ಸತ್ಯವಂತಳೆಂದು ಲೋಕಕ್ಕೆ ತಿಳಿಯಬೇಕು ಅದಕ್ಕಾಗಿ ರಾಮನು ಈ ರೀತಿ ನಡೆದುಕೊಂಡನು. ಸೀತೆ ಅಗ್ನಿಪ್ರವೇಶ ಮಾಡುವಾಗ ಅಗ್ನಿ ತನ್ನನ್ನು ಸುಡಲಿ ಎಂದು ಹೇಳಲಿಲ್ಲ, ಮನುಷ್ಯರ ನಡತೆಗೆ ಸಾಕ್ಷಿಯಾದ ಅಗ್ನಿದೇವ ತನ್ನನ್ನು ರಕ್ಷಿಸಲಿ ಎಂದು ಹೋದಳು. ರಾಮನಿಗೂ ಅಗ್ನಿ ಸುಡುವುದಿಲ್ಲವೆಂಬ ನಂಬಿಕೆಯಿತ್ತು ಆದ ಕಾರಣ ಅವಳು ಈ ಪರೀಕ್ಷೆಯಲ್ಲಿ ಪಾರಾದಳು. '' ಇವಳು ಸತ್ಯವಂತೆ ಎಂದು ಬಲ್ಲೆನು ಆದರೆ ಅದನ್ನು ಲೋಕಕ್ಕೆ ತಿಳಿಸುವುದಾಗಿ ಹೀಗೆ ಮಾಡಬೇಕಾಯಿತು''[೧೦] ಎನ್ನುವ ರಾಮನ ಮಾತಿನಲ್ಲಿ ಪೊಳ್ಳಿಲ್ಲ, ನಿಜವಾದ ಭಾವನೆಯನ್ನು ವ್ಯಕ್ತಪಡಿಸಿದನು. ಹೀಗೆ ಅನೇಕ ನಿದರ್ಶನಗಳನ್ನು ಕೊಟ್ಟು ರಾಮನನ್ನು ಅಪವಾದದಿಂದ ಮೇಲೆತ್ತುವ ಲೇಖಕರ ಪ್ರಯತ್ನವನ್ನು ಗಮನಿಸಬಹುದು. ಲೇಖಕರು ಕೇವಲ ರಾಮನ ದೃಷ್ಟಿಯಿಂದ ಈ ಪ್ರಸಂಗವನ್ನು ನೋಡಿದ್ದಾರಷ್ಟೇ, ಸೀತೆಯ ದೃಷ್ಟಿಯಿಂದ ನೋಡಿದರೆ ರಾಮನನ್ನು ದೇವರಾದರೂ ಕ್ಷಮಿಸಲು ಮನಸ್ಸು ಬರುವುದಿಲ್ಲ. ರಾವಣನ ಸೆರೆಯಿಂದ ಬಿಡಿಸಿ ಬಂದು, ಗಂಡನನ್ನು ಎಂದು ನೋಡುವನೋ ಎಂದು ಹಂಬಲಿಸುತ್ತಿದ್ದ ಸೀತೆಗೆ, ರಾಮನು ಮಾತುಗಳು ತಣ್ಣೀರೆರಚುತ್ತವೆ. ಸೀತೆಯನ್ನು ಬಿಡಿಸಿದ್ದು ತನ್ನ ಹೆಸರು ಕೆಡದಿರಲೆಂದು ಹೇಳುವ ರಾಮನು ಸ್ವಾರ್ಥಿಯಾಗುವುದಿಲ್ಲವೇ? '' ರಾವಣನ ತೊಡೆಯಿಂದ ಕೆಳಗೆ ಬಂದಿರುವಳೋ''[೧೧] ಮತ್ತು ''ಇಷ್ಟು ಮನೋಹರ ದಿವ್ಯರೂಪವುಳ್ಳ ನಿನ್ನನ್ನು ಗೃಹದಲ್ಲಿ ಇಷ್ಟುಕಾಲ ನೋಡುತ್ತ ರಾವಣನು ಸುಮ್ಮನೆ ಇದ್ದಿರಲಾರನಲ್ಲ''[೧೨] ಎನ್ನುವ ರಾಮನ ಮಾತುಗಳು ಅವನ ವ್ಯಕ್ತಿತ್ವಕ್ಕೆ ಘನತೆ ತರುವಂತವಲ್ಲ. ರಾಮನ ಮನಸ್ಸಿನಲ್ಲಿ ಸೀತೆಯ ಬಗೆಗೆ ಸಂಶಯವಿತ್ತೆಂದು ತೋರುತ್ತದೆ ಅದನ್ನುನೇರವಾಗಿ ಹೇಳದೆ ಲೋಕದ ಮೇಲೆ ಆರೋಪ ಹೊರಿಸಿ ತಾನು ತಪ್ಪಿಸಿಕೊಳ್ಳುತ್ತಾನೆ. ಒಂದು ವೇಳೆ ಸೀತೆಯು ರಾಮನ ಮೇಲೆ ಸಂಶಯ ಪಟ್ಟು ಅಗ್ನಿ ಪ್ರವೇಶಿಸು ಎಂದಿದ್ದರೆ. ರಾಮನಿಗೆ ಅಸ್ಥಿತ್ವವೇ ಇರುತ್ತಿರಲಿಲ್ಲ. ರಾಮನಿಗೆ ಅಗ್ನಿ ಸುಡುವುದಿಲ್ಲ ಎಂಬ ನಂಬಿಕೆ ಇರುವುದರಿಂದಲೇ ಸೀತೆಗೆ ಅಗ್ನಿ ಸುಡದೇ ಸುರಕ್ಷಿತವಾಗಿ ಬಂದಳು ಎಂಬುದು ಅತಿಶಯೋಕ್ತಿ ಎನಿಸುವುದಿಲ್ಲವೇ ? ಆದುದರಿಂದ ಈ ವಿಷಯದಲ್ಲಿ ಲೇಖಕರ ಮಾತುಗಳನ್ನು ಒಪ್ಪುವುದು ಕಷ್ಟವಾಗುತ್ತದೆ.

ಕವಿ ಮನುಷ್ಯನ ಜೀವನವನ್ನು ಚಿತ್ರಿಸಿರುವ ರೀತಿಯನ್ನು ವಿಶ್ಲೇಷಿಸದ ನಂತರ ಅವನ ವರ್ಣನೆಗಳ

---

೧೦. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ೧೨೮

೧೧. ಅದೇ ಪುಟ೧೧೨

೧೨. ಅದೇ ಪು೧೧೨

ಕಡೆಗೆ ಮಾಸ್ತಿ ಗಮನ ಹರಿಸುತ್ತಾರೆ., ಅವರ ಪ್ರಕಾರ ಮಾನವನ ಬಾಳನ್ನು ಸಮಗ್ರವಾಗಿ ಬಲ್ಲ ಕವಿ ಪ್ರಕೃತಿಯ ಬಾಳನ್ನೂ ಚೆನ್ನಾಗಿ ಬಲ್ಲನಾಗಿದ್ದು ತನ್ನ ಕಾವ್ಯದಲ್ಲಿ ಅದನ್ನು ತಂದಿದ್ದಾನೆ. ವರ್ಣನೆಗಳಲ್ಲಿ ಸಹಜವಾದ ವರ್ಣನೆ ಮತ್ತು ಪ್ರೌಢವಾದ ವರ್ಣನೆ ಎಂಬ ಎರಡು ವಿಧಗಳನ್ನು ಗುರುತಿಸದ ಲೇಖಕರು ಈ ಎರಡೂ ವರ್ಣನೆಗಳು ವಾಲ್ಮೀಕಿಯಲ್ಲಿ ಚೆನ್ನಾಗಿ ಸಿದ್ಧಿಸಿವೆ ಎನ್ನುತ್ತಾರೆ. ಮನುಷ್ಯನ ಸ್ವಭಾವವನ್ನು ಪ್ರಕೃತಿಗೆ ಆರೋಪಿಸುವ ಕವಿಗೆ ಆ ಆರೋಪಣೆ ಅತಿಯಾಗದಂತೆ, ಆದರೆ ಸೊಗಸಾಗುವಂತೆ ನೋಡಿಕೊಳ್ಳಬೇಕು. ''ಮುಖ್ಯವಾಗಿ ಯಾವ ಕೆಲಸವೇ ಆಗಲಿ ಚೆನ್ನಾಗಿ ಆಗಿದೆನ್ನುವುದು ಕಷ್ಟ ಹೊರತು ಸುಲಭ ಅಲ್ಲ. ಸುಲಭವಾಗಿ ಆಗಿರುವಂತೆ ಕಂಡರೂ ಅದರ ಹಿಂದೆ ವಿಶೇಷ ಶಕ್ತಿಯು ಬಹಳ ಕಲಿಕೆಯೂ ಅಭ್ಯಾಸವೂ ಇರುತ್ತದೆ. ಅತ್ಯುತ್ತಮ ಕವಿಗಳಲ್ಲಿ ಈ ರೀತಿಯ ವರ್ಣನೆಯೂ ಸೊಗಸಾಗಿ ಬರುತ್ತದೆ''[೧೩] ಎನ್ನುವ ಲೇಖಕರು ಆ ಶಕ್ತಿ ವಾಲ್ಮೀಕಿಯಲ್ಲಿದೆ, ಎಂದೂ ಹೇಳಿ ಅನೇಕ ನಿದರ್ಶನಗಳನ್ನು ಕೊಡುತ್ತಾರೆ. ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಹೇಳುವ ಕಥೆಗಳು, ರಾಮನು ಮಂದಾಕಿನಿಯನ್ನು ವರ್ಣಿಸಿದ್ದು, ಅನಸೂಯೆ ಸಂಜೆಯಾಯಿತೆಂದು ಹೇಳಿದಾಗ ಸೀತೆಯ ವರ್ಣನೆ, ಲಕ್ಷ್ಮಣನು ಹಿಮಂತ ಋತುವನ್ನು ವರ್ಣಿಸಿದ್ದು ಮುಂತಾದವು. ಪ್ರಕೃತಿಯ ಸೌಂದರ್ಯವನ್ನು ವರ್ಣಿಸಿರುವಂತೆಯೇ ವಾಲ್ಮೀಕಿಯ ಇತರ ವಿಷಯಗಳನ್ನು ಮನತುಂಬಿ ವರ್ಣಿಸುತ್ತಾನೆ. ಸ್ತ್ರೀ ಸೌಂದರ್ಯವನ್ನು ಕುರಿತಾದ ಅವನ ವರ್ಣನೆಯಲ್ಲಿ ಒಂದೊಂದೂ ಹೃದಯಂಗಮವಾಗಿವೆ. ಮಾನವನಿರ್ಮಿತ ಸೌಂದರ್ಯವನ್ನು ಕೂಡ ಕವಿ ಹೀಗೆಯೇ ವರ್ಣಿಸುತ್ತಾನೆ. ನಗರ, ಉದ್ಯಾನ, ಅರಮನೆಯ ವೈಭವವನ್ನೂ, ಭರತ, ರಾಮಾದಿಗಳು ಮತ್ತು ರಾವಣನವರೆಗಿನ ಆಸ್ಥಾನ ಮೆರವಣಿಗೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ. ಯುದ್ಧ ವರ್ಣನೆಗಳಂತೂ ವಿಸ್ತಾರದಲ್ಲಿ ಮಹತ್ತಾಗಿವೆ. ವಾಲ್ಮೀಕಿಯ ಯುದ್ಧವರ್ಣನೆಗಳು ನಮ್ಮ ದೇಶದ ಎಲ್ಲಾ ಸಾಹಿತ್ಯಕ್ಕೂ ಮೇಲ್ಪಂಕ್ತಿಯಾದವು ಎಂದು ಲೇಖಕರು ವಾಲ್ಮಿಕಿಯನು ಪ್ರಶಂಸಿದ್ದಾರೆ. ಒಟ್ಟಾರೆಯಾಗಿ '' ಇವನು ಕಾಣದ ವಿಷಯವಿಲ್ಲ, ಇವನು ವರ್ಣಿಸದ ವಿವರವಿಲ್ಲ''[೧೪] ಎಂದು ವಾಲ್ಮೀಕಿಯ ವರ್ಣನೆಗಳ ಮಹತ್ತನ್ನು, ಮಹತ್ವವನ್ನು ಲೇಖಕರು ಒಂದೇ ಮಾತಿನಲ್ಲಿ ಹೇಳುತ್ತಾರೆ.

ವಾಲ್ಮೀಕಿಯ ಕಥೆ ಹೇಳುವ ಶೈಲಿಯೇ ಬೇರೆ. ಒಂದು ಸರ್ಗದಲ್ಲಿ ಒಂದು ವಿಷಯ ಆರಂಭವಾಗುತ್ತದೆ. ಮತ್ತು ಮುಗಿಯುತ್ತದೆ. ಮುಂದಿನ ಸರ್ಗದಲ್ಲಿ ಇನ್ನೊಂದು ವಿಷಯ ಆರಂಭವಾಗುತ್ತದೆ. ಪ್ರತಿ ಸರ್ಗಗಳ ಉಪಸಂಹಾರದಲ್ಲಿ ಒಂದೊಂದು ಉಪನ್ಯಾಸವಿರುತ್ತದೆ. ಈ ಉಪನ್ಯಾಸದಲ್ಲಿ ಕುತೂಹಲವನು ಹೆಚ್ಚಿಸುವ ಸನ್ನಿವೇಶಗಳು ಮುಗಿಯುತ್ತವೆ. ಮುಂದಿನ ಸರ್ಗ ಕುತೂಹಲದೊಂದಿಗೆ ಪ್ರಾರಂಭವಾಗುತ್ತದೆ. ಹೀಗೆ ಕಥೆ ಹೇಳುವ ಕೌಶಲ ವಾಲ್ಮೀಕಿಗೆ ಸಿದ್ಧಿಸಿದೆ ಎಂದು ಲಖಕರು ಅಭಿಪ್ರಾಯಿಸಿದ್ದಾರೆ. ತೊಡಕಿನಲ್ಲಿ ಸಿಕ್ಕಿದ ಮನುಷ್ಯ

೧೩. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೧೬೧

೧೪. ಅದೇ ಪುಟ ೧೭೯

ಹೇಳುವ ಮಾತು, ಮಾಡುವ ಕೆಲವು ಅವನೊಂದು ಎಣಿಸಿದರೆ, ಇನ್ನೊಂದು ರೀತಿಯಾಗಿ ಪರಿಣಮಿಸುವುದನ್ನು ಚಿತ್ರಿಸುವುದರಲ್ಲಿ ವಾಲ್ಮೀಕಿಯ ಕಥನ ಕೌಶಲ ವ್ಯಕ್ತವಾಗಿರುವುದನ್ನು ಗುರುತಿಸಿದ ಲೇಖಕರು, ಅದನ್ನು ಸಾಭೀತುಪಡಿಸಲು ಕೆಲವು ನಿದರ್ಶನಗಳನ್ನು ಕೊಡುತ್ತಾರೆ. ಉದಾ: ದಶರಥನು ಭರತನಿಲ್ಲದ ವೇಳೆಯಲ್ಲಿ ರಾಮನಿಗೆ ಪಟ್ಟಕಟ್ಟಲು ನಿರ್ಧರಿಸಿ ಕೈಕೆಯಿ ಕೇಳಿದ ವರಗಳನ್ನು ಕೊಡುವುದಾಗಿ ರಾಮನ ಮೇಲೆ ಆಣೆಯಿಟ್ಟು ಅವನನ್ನೇ ಕಳೆದುಕೊಳ್ಳುತ್ತಾನೆ. ಅದೇ ರೀತಿ ಸೀತೆಯು ತನ್ನಿಂದ ಕಷ್ಟಬರಲಾರದೆಂದು ರಾಮನ ಮನವೊಲಿಸಿ, ಕಾಡಿಗೆ ಹೋದಳು. ಕೊನೆಗೆ ರಾಮನು ಕಷ್ಟದ ಹಾದಿಯಲ್ಲಿ ನಡೆಯಲು ಅವಳೇ ಕಾರಣಳಾದಳು ಇತ್ಯಾದಿ ಉದಾಹರಣೆಗಳ್ನು ಕೊಡಬಹುದು. ಬಾಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವ ವಾಲ್ಮೀಕಿ ಯಾವುದನ್ನು ಹೇಳಬೇಕು, ಹೇಗೆ ಹೇಳಬೇಕು ಎನ್ನುವ ವಿಷಯದಲ್ಲಿ ಸರಿಯಾದ ಮಾರ್ಗವನ್ನು ಕಂಡುಕೊಂಡನು. ಕಾವ್ಯದಲ್ಲಿ ಇಂಥ ರಸ ಇರುತ್ತದೆ. ಅದು ಹೇಗೆ ಇರಬೇಕು, ಎಂದು ನಿಯಮಿಸುವ ಮೀಮಾಂಸೆ ಇವನ ಕಾಲದಲ್ಲಿ ಇಲ್ಲದಿದ್ದರೂ, ಬದುಕಿನಲ್ಲಿ ಬರುವ ಎಲ್ಲಾ ರಸಗಳನ್ನೂ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿದ್ದಾನೆ. ವಾಲ್ಮೀಕಿಯ ಪ್ರಕಾರ ಶೃಂಗಾರ ರಸ ನಾವು ಉಸಿರಾಡುವ ಗಾಳಿಯಂತೆ ಬಾಳಿನಲ್ಲಿ ಇರತಕ್ಕ ರಸವಾಗಿದೆ. ಅದು ರಾಮ ಸೀತರ ವಿಷಯದಲ್ಲಿ ವ್ಯಕ್ತವಾಗಿದೆ. ರಾಮನ ಚರಿತ್ರೆಯಲ್ಲಿ ವೀರರಸಕ್ಕೆ ಕಡಿಮೆ ಇಲ್ಲ. ಶೂರ್ಪನಖಿಯ ಪ್ರಣಯದಲ್ಲಿ ಮತ್ತು ಕಾವಲು ರಾಕ್ಷಸಿಯರ ವರ್ಣನೆಯಲ್ಲಿ ಭೀವತ್ಸರಸ, ಉಕ್ಕಿಹರಿದಿದೆ. ಹೀಗೆ ವಾಲ್ಮೀಕಿಯ ಕಾವ್ಯದಲ್ಲಿ ಎಲ್ಲಾ ರಸಗಳನ್ನು ಗುರುತಿಸುವ ಪ್ರಯತ್ನವನ್ನು ಲೇಕಖರು ಮಾಡಿದ್ದಾರೆ. ವಾಲ್ಮೀಕಿಯಲ್ಲಿ ಉಪಮಾದಿ ಅಲಂಕಾರಗಳು ವಿಪುರವಾಗಿ ದೊರೆಯುತ್ತವೆ ಎಂಬುದನ್ನು ಸಂದರ್ಭಗಳ ಸಹಿತ ವಿವರಿಸುತ್ತಾರೆ.

ವಾಲ್ಮೀಕಿಯ ಕಾವ್ಯದಲ್ಲಿ 'ಶೀಲ'ದ ಪರಿಕಲ್ಪನೆಯನ್ನು ಲೇಖಕರು ತರುತ್ತಾರೆ.'ಶೀಲ' ಎಂದರೆ ಸಂಸ್ಕೃತಿಯ ತಿರುಳು. ಅದು ಗಂಡು ಹೆಣ್ಣಿನ ನಡತೆಗಳಲ್ಲಿ ವ್ಯಕ್ತವಾಗುತ್ತದೆ. ಇಂಥ ಸಂದರ್ಭಗಳು ರಾಮಾಯಣದಲ್ಲಿ ದೊರೆಯುತ್ತವೆ. ಮೊದಲನೆಯದು ವಿಶ್ವಾಮಿತ್ರ- ಅಪ್ಸರೆಯ ಪ್ರಸಂಗ ಎರಡನೆಯದು ಅಹಲ್ಯಾದೇವಿಯದು. ಈ ಎರಡೂ ಸಂದರ್ಭಗಳನ್ನು ವಿಶ್ಲೇಷಿಸಿ ವಾಲ್ಮೀಕಿ ಇಂದ್ರಿಯ ಇದ್ದು ಅದನ್ನು ಹಿಡಿತದಲ್ಲಿಟ್ಟುಕೊಳ್ಳುವ ಸ್ಥಿತಿಯನ್ನು ಪೂಜಿಸುತ್ತಾನೆ ಎಂದ ಹೇಳುತ್ತಾರೆ. ವಾಲ್ಮೀಕಿಯ ಕಾವ್ಯದಲ್ಲಿ ನಾಗರೀಕ ಜೀವನ, ಅಂದಿನ ರಾಜ್ಯವ್ಯವಸ್ಥೆ, ಸಂಸಾರ ಜೀವನ, ವ್ಯವಹಾರ, ಅಕ್ಕರೆ ಮುಂತಾದ ವಿಷಯಗಳ ಬಗೆಗೆ ಚರ್ಚಿಸುತ್ತಾರೆ. ''ರಾಮಾಯಣದ ಕವಿಗೆ ಮಮತೆ ಮಾನ್ಯವಸ್ತು ಬಾಳಿನ ಕಾಡಿನಲ್ಲಿ ಅದು ಮಲ್ಲಿಗೆಯಂತೆ. ಆದ್ದರಿಂದ ಕಾಡು ಶೋಭಿಸುತ್ತದೆ. ಗಾಳಿ ಇಂಪಾಗುತ್ತದೆ. ಕಾಡು ಕಾಣುವ ಚೆಲುವಿನ ಕನಸು ಅದರಲ್ಲಿ ರೂಪುಗೊಳ್ಳುತ್ತದೆ. ಕಾಡಿನ ಆಸೆ ಇದರಿಂದ ಪೂರ್ಣವಾಗುತ್ತದೆ''[೧೫] ಎಂದು ಕವಿಗೆ ಮಮತೆಯ ಮೇಲಿದ್ದ ಪ್ರತಿಯನ್ನು ಗುರುತಿಸುತ್ತಾರೆ.

೧೫. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೨೧೬.

ವಾಲ್ಮೀಕಿ ರಾಮಾಯಣದಲ್ಲಿ ಆರ್ಯ ದ್ರಾವಿಡ ಸಂಸ್ಕೃತಿಗಳ ಘರ್ಷಣೆಯ ಸೂಚನೆಯನ್ನು ಗುರುತಿಸಿದ ಲೇಖಕರು ಕಾವ್ಯದಲ್ಲಿ ರಾಕ್ಷಸರು ಯಜ್ಞಕ್ಕೆ ವಿರೋಧಿಗಳಾಗಿದ್ದು, ಇದು ಅವರ ದೌಷ್ಟ್ಯವೆಂದು ವಾಲ್ಮೀಕಿ ಭಾವಿಸಿದ್ದನೆಂದು ಹೇಳುತ್ತಾರೆ. ಲೇಖಕರು ಹೇಳುವುದೆಂದರೆ ಕವಿ ಉತ್ತರ ದೇಶದ ಆರ್ಯಜನಾಂಗದವನು. ಆದ್ದರಿಂದಲೇ ಅವನಿಗೆ ರಾಕ್ಷಸರ ವರ್ತನೆ ತಪ್ಪಾಗಿ ಕಂಡಿದೆ. ಆದರೆ ಮಾರಿಚನಂಥ ರಾಕ್ಷಸನು ತಪಸ್ಸಿನಲ್ಲಿ ಯಾವ ಆರ್ಯ ಋಷಿಗೂ ಕಡಿಮೆಯಾಗಿರಲಿಲ್ಲ ಎಂದು ಉದ್ಗಾರತೆಗೆಯುತ್ತಾರೆ. ಪ್ರಾರಂಭದಲ್ಲಿ ಇವರಿಬ್ಬರ ಮಧ್ಯೆ ಘರ್ಷಣೆ ನಡೆಯುತ್ತಿದ್ದವು. ಮುಂದೆ ಆರ್ಯ - ದ್ರಾವಿಡ ಸಂಸ್ಕೃತಿಗಳು ಮಿಲನವಾದ ಮೇಲೆ ಆರ್ಯರು, ದ್ರಾವಿಡರಿಗೆ ಸೇರಿದ ಭಕ್ತಿಪಂಥವನ್ನು ಅಂಗೀಕರಿಸಿದರು. ದ್ರಾವಿಡರು ಯಜ್ಞಗಳನ್ನು ಒಪ್ಪಿಕೊಂಡರೆಂದು ಲೇಖಕರ ಅಭಿಪ್ರಾಯವಾಗಿದೆ.

ಲೇಖಕರು ರಾಮಾಯಣದೊಂದಿಗೆ ಹೋಮರ್‌ನ ಇಲಿಯಡ್ ಮತ್ತು ಒಡಿಸ್ಸಿ, ವರ್ಜಿಲ್‌ನ ಈನಿಡ್, ಡಾಂಟೆಯ ಡಿವೈನ್ ಕಾಮಿಡಿ ಮತ್ತು ಮಿಲ್ಟನ್‌ನ ಪ್ಯಾರೆಡೈಸ್ ಲಾಸ್‌ಗಳನ್ನು ಹೋಲಿಸುತ್ತಾರೆ. ಈ ಎಲ್ಲಾ ಕೃತಿಗಳ ಮಿತವನ್ನು ಬಲ್ಲ ಕೃತಿಗಳಾಗಿವೆ. ಯುದ್ಧಗಳ ವರ್ಣನೆಯಲ್ಲಿ ವಾಲ್ಮೀಕಿಗೆ ಎಷ್ಟನ್ನು ಹೇಳಬಹುದು, ಎಷ್ಟನ್ನು ಬಿಡಬಹುದು ಎಂಬ ಯೋಚನೆ ಇರುವುದಿಲ್ಲ. ಆದುದರಿಂದ ರಾಮಾಯಣ ಹೋಮರನ ಕಾವ್ಯದಂತೆ, ಮಿಲ್ಟನನ ಕಾವ್ಯದಂತೆ ಅಚ್ಚುಕಟ್ಟಾಗಿ ಕಾಣುವುದಿಲ್ಲ ಎನ್ನುವ ಲೇಖಕರು ಇದನ್ನು ಬಿಟ್ಟರೆ ರಾಮಾಯಣದ ವಿಷಯದಲ್ಲಿ ಹೋಲಿಕೆಯಿಂದ ಬೇರೆ ಯಾವ ಕೊರತೆಯನ್ನು ಕಾಣುವುದಿಲ್ಲ ಎನ್ನುತ್ತಾರೆ. ಈ ಸಂದರ್ಭದಲ್ಲಿ ಪಾಶ್ಚಾತ್ಯ ವಿಮರ್ಶಕರೊಬ್ಬರ ಹೇಳಿಕೆಯ ಸಾರಾಂಶವನ್ನು ಕೊಡುತ್ತಾರೆ. ರಾಮಾಯಣದ ಜೀವನ ನಯವಾದದ್ದು, ನಾಯಕ, ನಾಯಕಿಯರ ಕಲ್ಪನೆ ಎತ್ತರವಾಗಿದೆ. ಕಲೆಯ ದೃಷ್ಟಿಗಿಂತ ಧರ್ಮ ಹೆಚ್ಚು ನೆಲೆಸಿದೆ. ಮತದ ಹೆಸರಿನಲ್ಲಿ ಪೌರೋಹಿತ್ಯ ತಲೆ ಹಾಕುತ್ತದೆ. ಸೀತೆಯ ಪಾತಿವ್ರತ್ಯ ಒಳ್ಳೆಯ ಗುಣಗಳು, ಅತಿಯಾಗಿವೆ. ಎಂಬುದು ಪಾಶ್ಚಾತ್ಯ ವಿಮರ್ಶಕರ ಸೂಚನೆಯಾಗಿದೆ ಹೀಗೆ ಪಾಶ್ಚಾತ್ಯರಿಗೆ ತಮ್ಮ ಕಾವ್ಯಗಳು ರಾಮಾಯಣಕ್ಕಿಂತ ಚೆನ್ನಾಗಿ ಕಾಣುವಂತೆ ನಮಗೂ ನಮ್ಮ ಕಾವ್ಯಗಳೆಂದರೆ ಅಷ್ಟೇ ಆಸಕ್ತಿ ಅಲ್ಲವೆ? ಈಚಿನ ಜನರಿಗೆ ಪಾಶ್ಚಾತ್ಯರಂತೆ ಬೇಸರವಾಗಿ ಏನು ನಿನ್ನ ರಾಮಾಯಣ ನಿಲ್ಲಿಸು ಎನ್ನುವರು. ಆದರೆ ಕಾವ್ಯದ ಸೊಗಸನು ಅರಿಯಬೇಕಾದರೆ, ರಾಮಾಯಣವನ್ನು ಪಾರಾಯಣ ಮಾಡಬೇಕು ಎನ್ನುತ್ತಾರೆ ಲೇಖಕರು.

ವಾಲ್ಮೀಕಿಗೆ ತಾನು ಕಂಡ ಜೀವನವನ್ನು ವರ್ಣಿಸುವುದು ಅವಶ್ಯಕವೆಂದು ತೋರಿ, ಅದನ್ನು ರಾಮಾಯಣದಿಂದ ತಂದನು. ಅಲ್ಲದೆ ವಾಲ್ಮೀಕಿ 'ನಾನು' ಎನ್ನುವುದನ್ನು ಎಲ್ಲಿಯೂ ಕಾವ್ಯದಲ್ಲಿ ಕಾಣಿಸಿಲ್ಲ , ವಿಶಾಲವಾದ ಪ್ರಂಪಚವನ್ನು ವಿಸ್ತಾರವಾದ ಜೀವನವನ್ನು ಸೂಕ್ಷ್ಮ ದೃಷ್ಠಿಯಿಂದ ನೋಡಿ, ಅದನ್ನು ಕಥೆಯಲ್ಲಿ ನಿರೂಪಿಸಿದ್ದಾನೆ. ಹೀಗಾಗಿ ವಾಲ್ಮೀಕಿ ಇತರರಿಗೆ ವಿಷಯವನ್ನು ಕಲಿಸುವ ಗುರುವಾಗಿದ್ದಾನೆ ಎಂದು ವಾಲ್ಮೀಕಿಗೆ ಗುರುವಿನ ಪಟ್ಟವನ್ನು ಕಟ್ಟುತ್ತಾರೆ. ರಾಮಯಣವನ್ನು ಕಾವ್ಯವೆಂದು ವಿಮರ್ಶೆ

ಮಾಡಿರುವುದರಿಂದ ಸಂಪ್ರದಾಯರಿಗೆ ಬೇಸರವಾಗಬಹುದೆಂಬ ಸಂಶಯ ಲೇಖಕರಿಗೆ ಬಂದಿರಬಹುದು . ಅದಕ್ಕೆ ಅವರು ಹೇಳುವುದೆಂದರೆ ದೊಡ್ಡವರು ಹೇಳುವ ಮಾತು ಮನುಷ್ಯರನ್ನು ಉದ್ಧರಿಸುತ್ತದೆ . ಒಳ್ಳೆಯದನ್ನೂ ಹೇಳುವವರನ್ನು ಗುರುವೆಂದು ಅಂಗೀಕರಿಸಬಹುದು. ಒಬ್ಬರನ್ನು ಗುರುವೆನ್ನುವುದು, ಒಂದು ಪುಸ್ತಕವನ್ನು ಮದವೆನ್ನುವುದು, ಒಂದು ದೇಶವನ್ನು ಮಾತೃಭೂಮಿಯೆನ್ನುವುದು ನಮ್ಮ ಸಂಸ್ಕೃತಿಯಲ್ಲಿ ಬೆಳೆದು ಬಂದಿದೆ. ಈ ಕಾರಣದಿಂದ '' ರಾಮಾಯಣವನ್ನು ಮತಗ್ರಂಥವೆಂದೂ, ಧರ್ಮಗ್ರಂಥವೆಂದೂ ಭಾವಿಸುವ ವಿಷಯದಲ್ಲಿ ಯಾರೂ ಅಸೂಯೆ ಪಡಬಾರದು''[೧೬] ಇದೂವರೆಗೂ ಕಾವ್ಯವೆಂದು ವರ್ಣಿಸಿದ ಲೇಖಕರು ಕೊನೆಗೆ ರಾಮಯಣವನ್ನು ಧರ್ಮಗ್ರಂಥವೆಂದು ಕರೆದಿರುವುದರ ಹಿನ್ನೆಲೆಯಲ್ಲಿ ಅದರ ಮನಸ್ಸು ಕೂಡ ರಾಮಯಣವನ್ನು ಪೂರ್ಣವಾಗಿ ಕಾವ್ಯವಾಗಿ ನೋಡಲು ಒಪ್ಪಲಿಲ್ಲ ಎನಿಸುತ್ತದೆ .

ವಾಲ್ಮೀಕಿಯ ಯೋಗ್ಯತೆಯಿಂದ ಭರತ ವರ್ಷದ ಆದಿಕವಿಯಾಗಿದ್ದಾನೆ. ವಾಲ್ಮೀಕಿ ಹಿರಿಯನೆನ್ನುವುದು ಹೊಸತಲ್ಲವಾದರೂ, ಹೊಸ ಪ್ರಪಂಚ ಜೀವನದಲ್ಲಿ ಜನರಿಗೆ ರಾಮಾಯಣದ ಪರಿಚಯ ಕಡಿಮೆಯಾಗಿದೆ. ರಾಮನ ಕಥೆಯನ್ನು ಬರೆದ ವಾಲ್ಮೀಕಿ ರಾಮನ ಪುಣ್ಯದಿಂದ ಕವಿಯಾದನು. ಹೊರಗಿನವರ ಪ್ರೇರಣೆ ಎಷ್ಟೇ ಇದ್ದರೂ ನಾವು ವಾಲ್ಮೀಕಿಯನ್ನು ಬಿಡುವುದಿಲ್ಲ.ವಾಲ್ಮೀಕಿಯಿಂದ ನಮ್ಮ ದೇಶಕ್ಕೆ ಮಾರ್ಯಾದೆ ದೊರೆತಿದೆ. ಲೇಖಕರ ಈ ಮಾತನ್ನು ನಾವು ಒಪ್ಪುವುದಾದರೂ, ರಾಮನ ಪುಣ್ಯ ವಾಲ್ಮೀಕಿಯನ್ನು ಕವಿಯಾಗಿಸಿತು ಎಂಬುದು ಅತಿಶಯೋಕ್ತಿಯಾಗುವುದಿಲ್ಲವೆ? ವಾಲ್ಮೀಕಿಯ ಕವಿತ್ವವನ್ನು ರಾಮನ ಪುಣ್ಯಕ್ಕೆ ಆರೋಪಿಸುವುದಾದರೆ ರಾಮಾಯಣವನ್ನು ಕಾವ್ಯವೆಂದು, ವಾಲ್ಮೀಕಿಯನ್ನು ಕವಿಗುರಿ ಎಂದು ಲೇಖಕರು ಬಣ್ಣಿಸಿರುವುದಕ್ಕೆ ಅರ್ಥವೇನು ಎಂಬ ಪ್ರಶ್ನೆಗಳನ್ನು ಎತ್ತಬಹುದಲ್ಲವೆ. ಲೇಖಕರು ಹೇಳುವ ಮುಂದಿನ ಮಾತೆಂದರೆ ಈಗಿನ ಪ್ರಪಂಚದಲ್ಲಿ ಅನುಪಮಸ್ಥಾನ ಇರುವ ಕಾವ್ಯ ಇದೊಂದೆ. '' ವಾಲ್ಮೀಕಿ ಸನಾತನಧರ್ಮದ ಕವಿಕೋಕಿಲ. ಅವನು ಪಂಡಿತರಿಗೆ ಹಿರಿಯನು. ಪಾಮರರಿಗೆ ಪ್ರಿಯನು . ಜನದ ಮನಸ್ಸಿನಲ್ಲಿ ಅವನು ಪ್ರತಿಷ್ಠೆಮಾಡಿದ ರಾಮನಾಮ ಈಗಲೂ ಅದರ ನಾಲಿಗೆಯಲ್ಲಿ ನಲಿಯುತ್ತದೆ.''[೧೭] ಎನ್ನುವ ಲೇಖಕರ ನಾಲಿಗೆಯ ಮೇಲೂ ಅದು ರಾಮ ನಾಮ ನಲಿಯುತ್ತಿದೆ.ಕೃತಿಯ ಅಂತ್ಯದಲ್ಲಿ ಶ್ರೀಕುವೆಂಪು ಅವರು ಲೇಖಕರ ಬಗೆಗೆ ಹೇಳುವ ಮೆಚ್ಚುಗೆಯ ಮಾತುಗಳ ಭಾಗವನ್ನು ಸೇರಿಸಲಾಗಿದೆ.

---

೧೬. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ ೨೫೫

೧೭. ಅದೇ ಪುಟ ೨೫೯

# ಸಮಾಲೋಕನ

ತಿ.ನಂ.ಶ್ರೀಯವರು ನವೋದಯದ ಪ್ರಮುಖ ವಿಮರ್ಶಕರಲ್ಲಿ ಒಬ್ಬರಾಗಿದ್ದಾರೆ. ಅವರ 'ಸಮಾಲೋಕನ' ವಿಮರ್ಶಾ ಕ್ಷೇತ್ರದಲ್ಲಿ ಒಂದು ಪ್ರಮುಖ ಕೃತಿಯಾಗಿದೆ.ಈ ಕೃತಿಯಲ್ಲಿ ಇಪ್ಪತ್ತೈದು ಬಿಡಿ ಲೇಖನಗಳನ್ನು ಕಾಣಬಹುದು.ತಿ.ನಂ.ಶ್ರೀ ಅವರ ನಿರ್ದಿಷ್ಟತೆ, ಅವರ ತೂಕದ ಮಾತು ಲೇಖನಗಳಲ್ಲಿ ಪ್ರತಿಬಿಂಬಿಸಿದೆ. ಅಧ್ಯಯನ ಲೋಕ ಎಷ್ಟು ವಿಷಯ ವೈವಿಧ್ಯದಿಂದ ಕೂಡಿದೆಯೆಂಬುದನ್ನು ತಿ.ನಂ.ಶ್ರೀಯವರು ಈ ಸಂಕಲನದಲ್ಲಿ ತಿಳಿಸಿದ್ದಾರೆ.

ನವೋದಯ ಸಾಹಿತ್ಯದ ಆಚಾರ್ಯ ಪುರುಷ ಬಿ.ಎಂ.ಶ್ರೀ ಅವರ'ಇಂಗ್ಲೀಷ ಗೀತೆಗಳು' ಕೃತಿಯನ್ನು ಕೃತಿಯ ಮೊದಲ ವಿಮರ್ಶೆಗೆ ಒಳಪಡಿಸಿರುವುದು ಔಚಿತ್ಯ ಪೂರ್ಣವಾಗಿದೆ.ಈ ಲೇಖನದಲ್ಲಿ ವ್ಯಕ್ತವಾಗಿರುವ ಇಂಗ್ಲೀಷ್ ಗೀತಗಳು ಕೃತಿ ರಚನೆಗೆ ಕಾರಣವಾದ ಹಿನ್ನೆಲೆಯು ಸಮಂಜಸವಾಗಿದೆ. ಬಿ.ಎಂ.ಶ್ರೀ ಅವರು ಇಂಗ್ಲೀಷ್‌ನ ಅನೇಕ ಉತ್ತಮ ಭಾವಗೀತೆಗಳನ್ನು ಆರಿಸಿಕೊಂಡಿದ್ದಾರೆಂದು ತಿ.ನಂ.ಶ್ರೀ ಅವರು ಹೇಳುತ್ತಾರೆ. ಆದರೆ ಅನುವಾದಿಸಲು ಸುಲಭವಾಗಿರುವ ಕವನಗಳನ್ನು ಮಾತ್ರ ಬಿ.ಎಂ.ಶ್ರೀಯವರು ಆರಿಸಿಕೊಂಡರೆಂಬ ಆಕ್ಷೇಪವು ಅವರ ಮೇಲಿರುವುದನ್ನು ತಿ.ನಂ.ಶ್ರೀ ಅವರು ಮರೆತಂತಿದೆ. ಬಿ.ಎಂ.ಶ್ರೀ ವರನ್ನು 'ಹೊಸಗನ್ನಡದ ಕವಿಕುಲಪತಿಗಳು' ಮತ್ತು 'ಆಧುನಿಕ ಕರ್ನಾಟಕ ಕವಿಚೂತವನ ಚೈತ್ರ' ಎಂದು ಬಣ್ಣಿಸಿರುವ ತಿ.ನಂ.ಶ್ರೀ ಅವರ ಮಾತುಗಳು ಅತಿಶಯೋಕ್ತಿ ಎನಿಸುವುದಿಲ್ಲ. 'ಸಖೀಗೀತ'ವನ್ನು ಕೈಗೆತ್ತಿಕೊಂಡ ಲೇಖಕರು ತಮಗಿಷ್ಟವಾದ ಕವನವನ್ನು ವಿಮರ್ಶಿಸಲು ಹೊರಟಿದ್ದಾರೆ.ಬೆಂದ್ರೆಯವರು ತಮ್ಮ 'ಸಖೀಗೀತ'ದ ಪ್ರತಿಯೊಂದು ಕವನದ 'ಸಂದರ್ಭ ಸೂಚನೆ' ಕೊಟ್ಟಿರುವುದರಿಂದ ತಾವು ವಿಮರ್ಶೆ ಕಾರ್ಯ ಕೈಗೊಳ್ಳಲು ಹಗುರವಾಯಿತು. ಎನ್ನುವ ಲೇಖಕರು ''ಶ್ರೀಮಾನ್ ಬೆಂದ್ರೆಯವರ ಪದ್ಯಗಳು ಬೇಗ ಅರ್ಥವಾಗುವುದಿಲ್ಲ.ಒಂದೊಂದು ಸಲ ಅವರು ಏನನ್ನು ಹೇಳಲು ಹೊರಟಿದ್ದಾರೆ. ಎಂಬುದು ತಿಳಿಯುವುದಿಲ್ಲ''[೧] ಎಂಬ ಮಾತನ್ನು ಲೇಖಕರೇ ಒಪ್ಪಿದಂತಾಗುತ್ತದೆ.ಈ ಲೇಖನದಲ್ಲಿ 'ಪುಟ್ಟ ವಿಧವೆ'ಯನ್ನು ಕುರಿತ ಲೇಖಕರ ಮಾತುಗಳು ಪರಿಣಾಮಕಾರಿ ಆಗಿದೆ. ಕನ್ನಡ ಸಾಹಿತ್ಯದಲ್ಲಿ 'ಯೆಂಡ್ಕುಡ್ಕ ರತ್ನ' ಎಂದು ಪ್ರಸಿದ್ಧವಾಗಿರುವ ಜಿ.ಪಿ.ರಾಜರತ್ನಂ ಅವರು ವಿಶಿಷ್ಟವಾದ ಕವಿಯಾಗಿದ್ದಾರೆ. ಇವರ ಕವಿತೆಗಳೆಲ್ಲ ಯೆಂಡ ಕುಡುಕನ ಪದಗಳೇ ಆಗಿವೆ. ಕುಡಿದ ಮತ್ತಿನಲ್ಲಿ ಪದಗಳನ್ನು ಕಟ್ಟಿದರೂ ಅವು ತುಂಬಾ ಪರಿಣಾಮಕಾರಿ ಕವಿತೆಗಳಾಗಿ ಮಾರ್ಪಡುತ್ತಿದ್ದವು. ಇವರು ಕುಡಿದ ಅಮಲಿನಲ್ಲಿ ಹಾಡುತ್ತಿದ್ದರೂ ಇತರ ಕುಡಿದವರಲ್ಲಿರುವಂತೆ ಅಸಭ್ಯತೆಯಾಗಲಿ, ಒರಟುತನವಾಗಲಿ ಇರಲಿಲ್ಲ ಈ ಸಂದರ್ಭದಲ್ಲಿ ತಿ.ನಂ.ಶ್ರೀ ಅವರು ಹೇಳುವ '' ಇವನು

೧. ತಿ.ನಂ.ಶ್ರೀ: ಸಮಾಲೋಕನ, ಶೃಂಗಾರ ಪ್ರಕಾಶನ, ೧೯೯೯, ಪುಟ ೫೭.

ಕೆಸರಿನಲ್ಲಿ ಹುಟ್ಟಿದ ಕಮಲ, ಸುರಾಯೋಗಿ''[೨] ಎಂಬ ಮಾತು ಸತ್ಯವಾಗಿದೆ. ತಾವು ನಿತ್ಯವೂ ನೋಡುವ ಹೆಂಡದಂಗಡಿಯ ವ್ಯವಹಾರವನ್ನು ಇಡೀ ಲೋಕ ವ್ಯವಹಾರಕ್ಕೆ ಅನ್ವಯಿಸಿ ಹೇಳುವ ಚತುರತೆ ಅವರದು.ಸ್ವಾಮಿ ಕಾರ್ಯ ಸ್ವಕಾರ್ಯ ಎರಡನ್ನೂ ಮುಗಿಸುತ್ತಿದ್ದರು.ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ ಕನ್ನಡ ಕವಿಗಳು ಪಂಡಿತರಿಗಾಗಿ ಬರೆದಿರುವುದೇ ಹೆಚ್ಚು,ಸಾಮಾನ್ಯರು, ಹೆಂಗಸರು ಮಕ್ಕಳನ್ನು ಕುರಿತಾದ ಸಾಹಿತ್ಯ ರಾಶಿ ಬೆಳೆಯದಿರುವುದನ್ನು ಕಾಣುತ್ತೇವೆ. ಅದರಲ್ಲೂ ಮಕ್ಕಳು ತಾವೇ ಹೇಳಿಕೊಳ್ಳುವ ಕವಿತೆಗಳು ಹುಟ್ಟಲಿಲ್ಲ.ಈ ನಿಟ್ಟಿನಲ್ಲಿ ರಾಜರತ್ನಂ ಅವರ ಪ್ರಯತ್ನ ಗಮನಾರ್ಹವಾದುದು.ಅವರು ತಾವು ಮಗುವಾಗಿ ಹಾಡನ್ನು ಕಟ್ಟುತ್ತಿದ್ದರು. ಅಲ್ಲದೆ ಮಕ್ಕಳನ್ನು ಉಲ್ಲಾಸಪಡಿಸುವುದರ ಜೊತೆಗೆ ಹಾಡಿನ ಮೂಲಕ ನೀತಿಯನ್ನು ಬೋಧಿಸುವಂತಹ ತುತ್ತೂರಿ, ಊಟದ ಆಟ, ಹತ್ತುಮಕ್ಕಳು, ಹತ್ತು-ಹತ್ತು ಇಪ್ಪತ್ತು ಇತ್ಯಾದಿ ಕವನಗಳನ್ನು ತಿ.ನಂ.ಶ್ರೀಯವರು ಹೆಸರಿಸುತ್ತಾರೆ.

ಅಹಲ್ಯೆಯ ಪ್ರಸಂಗ ವಾಲ್ಮೀಕಿಯಲ್ಲಿ ವ್ಯಕ್ತವಾಗಿದ್ದರೂ ಅದು ಕಥೆಯ ಹದವರಿದು ಬಂದಿತ್ತು.ವಾಲ್ಮೀಕಿಯಲ್ಲಿ ರಾಮನೇ ಕೇಂದ್ರಬಿಂದುವಾಗಿದ್ದು ಈ ಪ್ರಸಂಗವನ್ನು ಎತ್ತಿಕೊಂಡ ಪು.ತಿ.ನರಸಿಂಹಚಾರ್ ಅವರು ಅಹಲ್ಯೆಯನ್ನು ಕೇಂದ್ರವ್ಯಕ್ತಿಯನ್ನಾಗಿ ಮಾಡಿಕೊಂಡಿರುವಲ್ಲಿನ ಔಚಿತ್ಯವನ್ನು ತಿ.ನಂ.ಶ್ರೀ ಅವರು ಸ್ಪಷ್ಟಪಡಿಸುತ್ತಾರೆ.ಈ ಕಥೆಯೆಲ್ಲಕ್ಕೂ ಮೂಲ ಬೀಜ ಅವರವರ ಪ್ರವೃತ್ತಿಯಲ್ಲೇ ಹೇಗೆ ವ್ಯಕ್ತವಾಗಿದೆ ಎಂಬುದನ್ನು ತಿ.ನಂ.ಶ್ರೀ ಅವರು ಚರ್ಚಿಸಿದ್ದಾರೆ. ಮುಂದೆ 'ಕೆರೆಗ ಹಾರ' ಎಂಬ ಕೋಲಾಟದ ಪದವನ್ನು ಚರ್ಚೆಗೆ ಎತ್ತಿಕೊಂಡು ಅದರಲ್ಲಿ ಬರುವ ಹಿರಿಯದ ಸಂಪ್ರದಾಯ ಮತ್ತು ನಂಬಿಕೆ, ಭಾಗೀರಥಿಯ ಮನೋದಾರ್ಢ್ಯದ ಉದಾತ್ತತೆ.ಮಾಧವರಾಯನ ಅಪರಿಮಿತವಾದ ಪ್ರೇಮ ಮತ್ತು ವಿಶೇಷವಾಗಿ ಗೆಳತಿಯೊಬ್ಬಳ ಜವಬ್ದಾರಿಯುತ ನಡವಳಿಯನ್ನು ಕುರಿತು ವಿವರಿಸಿ'' ಈ ಕೃತಿಯನ್ನು ಕಟ್ಟಿದ ಹಳ್ಳಿಯ ಅಜ್ಞಾತ ವ್ಯಕ್ತಿ ಒಬ್ಬ ಶ್ರೇಷ್ಠ ಕವಿ.'ಕೆರೆಗೆ ಹಾರ' ಕನ್ನಡ ಕಾವ್ಯಶ್ರೀಯ ಕಂಠದ ಹಾರ''[೩] ಎಂದು ಮುಕ್ತ ಕಂಠದಿಂದ ಹೊಗಳಿರುವುದು ಅತಿಶಯೋಕ್ತಿ ಎನಿಸುವುದಿಲ್ಲವೆಂಬುದೇ ನನ್ನ ಭಾವನೆ ಮುಂದೆ ತಿ.ನಂ.ಶ್ರೀ ಅವರು 'ಪಂಪ ಭಾರತ'ದಲ್ಲಿ ಕೃಷ್ಣನ ಬಗ್ಗೆ ಪಂಪನಲ್ಲಿ ವ್ಯಕ್ತವಾಗಿರುವ ವಿಚಾರದಲ್ಲಿ ಆಕ್ಷೇಪಗಳನ್ನೆತ್ತಿ ತಾವೇ ಸಮಾಧಾನ ಹೇಳುತ್ತಾರೆ. ಪಂಪ ತನ್ನ ಕಾವ್ಯದಲ್ಲಿ ಮಹಾಭಾರತದ ಅನೇಕ ಪಾತ್ರಗಳ ವ್ಯಕ್ತಿತ್ವವನ್ನು ಬಣ್ಣಿಸುತ್ತಾನೆ. ಇದರಲ್ಲಿ ಮಹಾಭಾರತಕ್ಕೆ ಪ್ರೇರಳಕಾದ ದ್ರೌಪದಿಯ ಹೆಸರಾಗಲಿ, ಪಾಂಡವರ ಸೂತ್ರಧಾರಿಯಾದ ಕೃಷ್ಣನ ಹೆಸರಾಗಲಿ ಇಲ್ಲ.ಇದಕ್ಕೆ ಲೇಖಕರ ಸಮಾಧಾನವೆಂದರೆ ಪಂಪನು ಲೌಕಿಕ ವ್ಯಕ್ತಿಗಳನ್ನು ಮಾತ್ರ ಹೆಸರಿಸಿದನೆಂದು ಕೃಷ್ಣನು ಅಲೌಖಿಕ, ದೈವತ್ವದ ನೆಲೆಯವನು ಎಂಬುದು, ಲೇಖಕರ ಮಾತನ್ನು ಒಪ್ಪಬಹುದಾದರೂ, ಇಡೀ ಮಹಾಭಾರತವನ್ನು ನಡೆಸಿದ ಕೃಷ್ಣನ ಸ್ಮರಣೆಯೂ ಇಲ್ಲದಿರುವುದನ್ನು

---

೨. ತಿ.ನಂ.ಶ್ರೀ: ಸಮಾಲೋಕನ, ಶೃಂಗಾರ ಪ್ರಕಾಶನ, ೧೯೯೯, ಪುಟ೬೪.
೩. ಅದೇ ಪುಟ೧೦೩

ಪಂಪನಲ್ಲಿ ಕಾಣಬಹುದು.ಕುಮಾರವ್ಯಾಸನು ಕೃಷ್ಣ ಭಕ್ತನಾದುದರಿಂದ ಅವನ ಕೃತಿಯಲ್ಲಿ 'ಕೃಷ್ಣಾಮೃತ' ಹರಿದಿದೆ ಎಂಬುದನ್ನು ಒಪ್ಪುವುದಾದರೆ ಪಂಪನು ಜೈನನಾದುದರಿಂದ ಕೃಷ್ಣನನ್ನು ಮರೆತಿದ್ದಾನೆ ಎಂದು ಹೇಳಲು ಅವಕಾಶವಿದೆ. ನಮ್ಮ ಕಾವ್ಯಪ್ರಪಂಚದಲ್ಲಿ ವಿಪುಲವಾಗಿ ಬರುವ ವರ್ಣನೆಗಳಿಗೆ ಸಂಬಂಧಿಸಿದಂತೆ ಆದಿಕವಿ ವಾಲ್ಮೀಕಿಯೇ ಮುಂದಿನ ಕವಿಗಳಿಗೆ ಮಾದರಿಯನ್ನು ಒದಗಿಸಿಕೊಟ್ಟನೆಂದು ತಿ.ನಂ.ಶ್ರೀ ಅವರು ಹೇಳುತ್ತಾರೆ. ಮಾಸ್ತಿಯವರು ತಮ್ಮ 'ಆದಿಕವಿ' ವಾಲ್ಮೀಕಿ ಕೃತಿಯಲ್ಲಿ ಒಂದು ಕಡೆ ''ವಾಲ್ಮೀಕಿಯ ವರ್ಣನೆಗಳು ಆಮೇಲೆ ಬಂದವರಿಗೆ ಆದರ್ಶಗಳಾದವು ''[೪] ಎಂದಿದ್ದಾರೆ. ಈ ಎರಡು ಹೇಳಿಕೆಗಳನ್ನು ಗಮನಿಸಿದಾಗ ಆದಿಕವಿಯಾದವನು ಮುಂದಿನ ಕವಿಗಳಿಗೆ ದಾರಿದೀಪವಾಗಿದ್ದಾನೆ ಎನ್ನುವುದರಲ್ಲಿ ಸಂಶಯವಿಲ್ಲ.ಸಾಹಿತ್ಯದಲ್ಲಿ ವಾಸ್ತವಿಕತೆ ಎಂಬ ವಿಷಯವಾಗಿ ತಿ.ನಂ.ಶ್ರೀ ಅವರು 1945ರಲ್ಲಿ ಬೆಂಗಳೂರಿನಲ್ಲಿ ನಡೆದ ಸಣ್ಣಕಥೆ ಬರಹಗಾರರ ಮೂರನೆಯ ಸಮ್ಮೇಳನದಲ್ಲಿ ಮಾತನಾಡುತ್ತಾರೆ. 'ವಾಸ್ತವತೆ' ಎಂದರೆ ತನ್ನ ಎದುರಿಗಿರುವ ಪ್ರಪಂಚದಲ್ಲಿ ಲೇಖಕನು ಏನನ್ನು ಕಾಣುವನೋ ಅದು ಹೇಗೆ ಇರಲಿ, ಯಾವ ವಿಷಯವೇ ಆಗಿರಲಿ ಅದನ್ನು ಕೃತಿಯಲ್ಲಿ ನಿರೂಪಿಸುವುದು.ಲೇಖಕರು ಹೇಳುವುದೇನೆಂದರೆ ಜಗತ್ತಿನಲ್ಲಿರುವುದನ್ನು ನೇರವಾಗಿ ಕೃತಿಯಲ್ಲಿ ತರುವುದೆಂದರೆ ಅಕ್ಕಿ ಬೇಳೆಯನ್ನು ಸ್ವಚ್ಛ ಮಾಡದೇ,ಬೇಯಿಸದೆ ಊಟ ಮಾಡಿದಂತೆ .ಹೀಗಾಗಿ ಲೇಖಕನು ಜಗತ್ತಿನಿಂದ ವಿಷಯವನ್ನು ತೆಗೆದುಕೊಂಡು ಅದನ್ನು ತನ್ನ ಕಲ್ಪನೆಯ ಮೂಸೆಯಲ್ಲಿ ಹಾಕಿ ಕಥೆ ಕಟ್ಟಬೇಕು.ಇಲ್ಲದಿದ್ದರೆ ಅದು ವರದಿಯಾಗುವುದೇ ಹೊರತು ಸಾಹಿತ್ಯ ಕೃತಿಯಾಗಲಾರದು.

ದಾನಚಿಂತಾಮಣಿಯೆಂಬ ಖ್ಯಾತಿವೆತ್ತ ಅತ್ತಿಮಬ್ಬೆಯ ಬಗೆಗೆ ಲೇಖಕರು ನಾಲ್ಕಾರು ಮಾತನಾಡುತ್ತಾರೆ. ಚಿಕ್ಕ ವಯಸ್ಸಿನಲ್ಲಿ ಗಂಡನನ್ನು ಕಳೆದುಕೊಂಡ ಅತ್ತಿಮಬ್ಬೆ ಪುತ್ರನ ಪಾಲನೆಗಾಗಿ ನಿಂತಳು ಸಂನ್ಯಾಸವನ್ನು ಸ್ವೀಕರಿಸದೇ, ಶ್ರಾವಕಿಯಾಗಿದ್ದುಕೊಂಡೇ ಜೈನ ಧರ್ಮದ ಸೇವೆಗಾಗಿ ತನ್ನನ್ನೇ ಅರ್ಪಿಸಿಕೊಂಡಳು.ಇವಳ ಧರ್ಮದ ಮೇಲಿನ ಭಕ್ತಿ, ಅಭಿಮಾನ ಎಷ್ಟಿತ್ತೆಂದರೆ ಜೈನ ಧರ್ಮಕ್ಕೆ ಸಂಬಂಧಿಸಿದ 'ಶಾಂತಿಪುರಾಣ'ದ 1500 ಪ್ರತಿಮೆಗಳನ್ನು ಮಾಡಿಸಿ ದಾನ ಮಾಡಿದ ದಾನ ಚಿಂತಾಮಣಿ ಈಕೆಯ ಬಗೆಗಿನ ರನ್ನನ ವರ್ಣನೆ, ಶಾಸನಗಳನ್ನು ಚರ್ಚಿಸಿದ ಲೇಖಕರು ಅವಳ ಮಹತ್ವವನ್ನು ಎತ್ತಿ ಹಿಡಿಯುತ್ತಾರೆ.

ಕನ್ನಡ ಸಾಹಿತ್ಯ ನಿಂತ ನೀರಲ್ಲ ಅದು ಹರಿಯುತ್ತಿರುವ ನದಿ, ಕವಿಯ ಭಾವನೆ ಬದಲಾದಂತೆ, ಸಾಹಿತ್ಯ ರೂಪಗಳು ಬದಲಾಗಬೇಕು.ಅಂದರೆ ನಮ್ಮ ಪ್ರಾಚೀನ ಸಾಹಿತ್ಯ ರೂಪಗಳಾದ ವೃತ್ತ, ಕಂದ,ಷಟ್ಪದಿ, ರಗಳೆ ಇವಾವುವು ಇಂದಿನ ಕನ್ನಡ ಸಾಹಿತ್ಯಕ್ಕೆ ಒಗ್ಗುವಂತಿಲ್ಲ, ಏಕೆಂದರೆ ಲಿಪಿಯಲ್ಲಾಗಿರುವ ವ್ಯತ್ಯಾಸವನ್ನೇ ಗುರ್ತಿಬಹುದು.ಹೊಸಗನ್ನಡವನ್ನು ಉಪಯೋಗಿಸಿ ವೃತ್ತಗಳನ್ನು ಬರೆದರೆ ವಿಲಕ್ಷಣವಾಗಿ

೪. ಮಾಸ್ತಿ ವೆಂಕಟೇಶ ಅಯ್ಯಂಗಾರ್ : ಆದಿಕವಿ ವಾಲ್ಮೀಕಿ, ಜೀವನ ಕಾರ್ಯಾಲಯ ಟ್ರಸ್ಟ್, ೧೯೯೫, ಪುಟ೧೭೫

ಕಾಣಿಸುತ್ತವೆ.ಕಂದವನ್ನು ಬರೆದರು ಸಮರ್ಪಕವಾಗಿ ಇರುವುದಿಲ್ಲ.ಆದುದರಿಂದ ಹೊಸಗನ್ನಡಕ್ಕೆ ಹೊಸದಾದ ಮಟ್ಟಗಳು ಅವಶ್ಯಕವಾಗಿದೆ.ಈ ಮಟ್ಟಗಳು ಇಂಗ್ಲೀಷ್ ಸಾಹಿತ್ಯದ,ಸಂಪರ್ಕದಿಂದ ಬಂದಿವೆ ಎಂಬ ಲೇಖಕರ ಮಾತನಲ್ಲಿ ಸುಳ್ಳಿಲ್ಲ. ಇಂಗ್ಲೀಷ್‌ನ ಛಂದಸ್ಸಿನಲ್ಲಿ ಪ್ರಯೋಗವಾದ ಭಾವಗೀತೆ, ಪುಗಾಥ, ಸಾನೆಟ್ ಮುಂತಾದವು ಕನ್ನಡದಲ್ಲಿ ಸಾಧ್ಯವಾಗಿದೆ. ಈ ಸಾಧನೆಗಾಗಿ ನಾವು ''ನಮ್ಮ ತಾಯಿ ಬೇರನ್ನು ಭೇದಿಸಿ ಬೇರೊಂದು ಸಸಿಯನ್ನು ಪರದೇಶದಿಂದ ತಂದು ನೆಟ್ಟು ಬೆಳೆಸಬೇಕಾಗಿಲ್ಲ. ತನ್ನ ಸಸಿಯನ್ನೇ ಕಸಿ ಮಾಡಿ ಬೆಳೆಸಿದರಾಯಿತು''೫. ಎಂಬ ಲೇಖಕರ ಮಾತಿನಂತೆ ನಮ್ಮ ಭಾಷೆಗೆ ತಕ್ಕ ಛಂದಸ್ಸಿನ ಮಟ್ಟಗಳನ್ನು, ಇಂಗ್ಲೀಷ್‌ನ ಮಟ್ಟಗಳನ್ನು ನೋಡಿ ಬೆಳೆಸಿಕೊಳ್ಳುವುದರಲ್ಲಿ ತಪ್ಪಿಲ್ಲ ಎನಿಸುತ್ತದೆ. ಹೀಗೆ ದಿನದಿಂದ ದಿನಕ್ಕೆ ಬದಲಾಗುತ್ತಿರುವ ಹಾಗೂ ಬದಲಾಗಲು ಅಪೇಕ್ಷಿಸುತ್ತಿರುವ ಸಮಾಜಕ್ಕೆ ಆಯಾ ಕಾಲದ ಜನಕ್ಕೆ ಅವರವರ ಅಭಿಲಾಷೆ, ಸಂವೇದನೆಗಳಿಗೆ ಹೊಂದಿಕೊಂಡು ಸಾಹಿತ್ಯ ವಸ್ತು ಹಾಗೂ ಅದನ್ನು ಒಳಗೊಂಡ ಛಂದಸ್ಸು ಬದಲಾವಣೆ ಹೊಂದಲು ಅನಿವಾರ್ಯವಾಯಿತು. ಈ ಬದಲಾವಣೆಗೆ ತಕ್ಕಂತೆ ಛಂದಸ್ಸಿನಲ್ಲಾದ ಹೊಸ ಪ್ರಯೋಗಗಳನ್ನು ಲೇಖಕರು ನಿದರ್ಶನಗಳ ಸಹಿತ ಪರಿಚಯ ಮಾಡುತ್ತಾರೆ.ಅವುಗಳೆಂದರೆ ನಮ್ಮ ಛಂದಸ್ಸಿಗೆ ಮಾನದಂಡವಾದ ಗಣ, ಲಘು, ಗುರು ವಿನ್ಯಾಸಗಳು, ಛಂದಸ್ಸಿನ ಜೀವಾಳವಾಗಿರುವ ಲಯ, ಆರು ಮಾತ್ರೆಯ ಗಣ, ಸ್ವರಘಾತ,ಗಣಪರಿವೃತ್ತಿ,ಪ್ಲುತ ಕಂಪಿತ ಮುಡಿ ಮುಂತಾದವುಗಳನ್ನು ಅನೇಕ ಕವಿಗಳ ಪದ್ಯಗಳನ್ನು ಉದಾಹರಣೆಯಾಗಿ ಕೊಟ್ಟ ವಿವರಿಸುತ್ತಾರೆ. ಹೊಸ ನಾದಗಳಿಗೆ ಒಳಗಾಗುತ್ತಿರುವ ಕಾಲದಲ್ಲಿ ತಾವು ಹೇಳಿರುವ ಛಂದಸ್ಸಿನ ಪ್ರಯೋಗಗಳು ಸರಿಯೆಂದು, ಅದೇ ಅಂತಿಮ ಎಂದು ಹೇಳದೆ ವಿಚಾರ ಮಾಡಬೇಕೆಂದು ಓದುಗರಿಗೆ ಬಿಡುತ್ತಾರೆ.

ಶ್ರೀ ದೇಸಾಯಿ ಪಾಂಡುರಂಗರಾಯರು 'ಅಮ್ಮಿನಭಾವಿಯ ಶಾಸನ'ದಲ್ಲಿರುವಂತೆ ಪದ್ಯದಿಂದ 'ಷಟ್‌ಪದ' ಎಂಬ ಪದವನ್ನು ಎತ್ತಿಕೊಂಡು ಅದರ ಲಕ್ಷಣವನ್ನು ಕುರಿತು ವಿಚಾರ ಮಾಡಿರುವ ತಿ.ನಂ.ಶ್ರೀ ಅವರು ಚರ್ಚೆ ಮಾಡುತ್ತಾರೆ. ಈ ಶಾಸನದ ಕೆಲವು ಭಾಗ ಸವೆದುಹೋಗಿದ್ದು ಉಳಿದ ಪದ್ಯವನ್ನು 'ಷಟ್ಪದ' ಎಂದು ದೇಸಾಯಿಯವರು ಕರೆದಿದ್ದಾರೆ. ಇವರ ಪ್ರಕಾರ ಇದು 'ಶರ',''ಪರಿವರ್ಧಿನಿ' ಮೊದಲಾದ ಷಟ್ಪದಿ ಪ್ರಭೇಧಗಳಿಗೆ ಸಂಬಂಧಿಸಿದ ಲಕ್ಷಣವಲ್ಲ. ಇದನ್ನು ಪರೀಕ್ಷಿಸಿದ ದೇಸಾಯಿಯವರು ಇದೊಂದು 'ಅಪೂರ್ವಷಟ್ಪದಿ' ಎಂಬ ನಿರ್ಣಯಕ್ಕೆ ಬಂದಿರುವುದನ್ನು ಲೇಖಕರು ಕಾಣುತ್ತಾರೆ. ಮುಂದೆ ಇದರ ಬಗ್ಗೆ ವಿಚಾರ ಮಾಡುತ್ತಾ ಕನ್ನಡದಲ್ಲಿ ಮೊದಲಿಗೆ ಇದ್ದುದು ಒಂದೇ ಷಟ್ಪದಿಯಾಗಿದೆ.ನಾಗವರ್ಮನು ತನ್ನ 'ಛಂದೋಬುಧಿ'ಯಲ್ಲಿ ಷಟ್ಪದಿ ಎಂಬ ಹೆಸರು ಕೊಟ್ಟು ಲಕ್ಷಣಗಳನ್ನು ಹೇಳುತ್ತಾನೆ. ಜಯಕೀರ್ತಿಯು 'ಛಂದೋನುಶಾಸನ' ಶಾಙ್ಗದೇವನ 'ಸಂಗೀತ ರತ್ನಾಕರ' ಅಷ್ಟ ಕವಿಯಳ,೨೯೬ ಎಂಬ ಪ್ರಾಚೀನ

೫. ತಿ.ನಂ.ಶ್ರೀ: ಸಮಾಲೋಚನ, ಶೃಂಗಾರ ಪ್ರಕಾಶನ, ೧೯೯೯, ಪುಟ೧೮೭

ಛಂದೋಗ್ರಂಥಗಳಲ್ಲಿ ಹೇಳಿರುವ ಷಟ್ಪದಿಯ ಲಕ್ಷಣಗಳು ಸಮಾನವಾಗಿವೆ. ದೇಸಾಯಿಯವರು ಹೇಳಿರುವ ಪದ್ಯದಲ್ಲಿ ಒಂದೆರಡು ಸಂದೇಹಗಳನ್ನು ಬಿಟ್ಟರೆ, ಈ ಷಟ್ಪದಿಯು ಅಂಶಗಣವಾಗಿಯೇ ಇದ್ದು, ಲಕ್ಷಣದ ದೃಷ್ಟಿಯಿಂದ 'ಅಪೂರ್ವ ಷಟ್ಪದಿ' ಎಂಬುದೇನೂ ಆಗಿರಲಾರದು. ಮುಂದೆ ಹಳೆಗನ್ನಡ, ನಡುಗನ್ನಡದ ಕವಿಗಳಲ್ಲಿ 'ಏನೀ-ಗಡಿಂ-ರೀ' ಎಂಬ ರೂಪಗಳ ಬಗೆಗೆ ವಿಚಾರ ಮಾಡುತ್ತಾರೆ. ಹರಿಹರನ 'ನಂಬಿಯಣ್ಣನ ರಗಳೆ'ಯಲ್ಲಿ 'ಕುಮಾರವ್ಯಾಸ ಭಾರತ'ದಲ್ಲಿ ೨ ಸಲ ಏನೀ ರೂಪವು ಬಳಕೆಯಾಗಿರುವುದನ್ನು ಗುರ್ತಿಸಿದ್ದಾರೆ. ಏನ್+ಇಂ-ಏನಿಂ, ಏನಿ ಆಗಿದ್ದು ಹಳಗನ್ನಡದ ಅಂತ್ಯ ಬಿಂದು ನಡುಗನ್ನಡದಲ್ಲಿ ಲೋಪವಾಗಿರಬಹುದೆಂದು ಹೇಳುತ್ತಾರೆ. ಹಾಗೆಯೇ ಪಂಪನ 'ಆದಿಪುರಾಣ'ದಲ್ಲಿ ರನ್ನನ 'ಗದಾಯುದ್ಧ'ದಲ್ಲಿ ೨ನೇ ನಾಗವರ್ಮನ'ಕಾವ್ಯಲೋಕನ' ಕೃತಿಯಲ್ಲಿ 'ಗಡಿ,ಗಡಂ' ಎಂಬ ರೂಪಗಳಿದ್ದು, 'ಗಡ' ಎಂಬ ಅವ್ಯಯಕ್ಕೆ 'ಇಂ'ಸೇರಿ 'ಗಡಿಂ' ಆಗಿ, ಬಿಂದು ಲೋಪವಾಗಿದೆ. ಹೊಸಗನ್ನಡದಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ 'ಎಲ್ರೀ,ಹ್ಯಾಗ್ರೀ, ಬೀಕ್ರೀ, ಏನ್ರೀ' ಇತ್ಯಾದಿ ಪ್ರಯೋಗದಲ್ಲಿರುವ 'ರೀ'ಯ ಮೂಲವನ್ನು ತಿ.ನಂ.ಶ್ರೀ ಅವರು ಹಳಗನ್ನಡದಲ್ಲಿ ಹುಡುಕುತ್ತಾರೆ.'ಇರ್' ಎಂಬುದು 'ಇರಿ' ಆಗಿ ಅಂತ್ಯದಲ್ಲಿ 'ರೀ' ಎಂದಾಗಿದೆ. ''ಹಳಗನ್ನಡ, ನಡುಗನ್ನಡ, ಹೊಸಗನ್ನಡ ಈ ಮೂರು ಅವಸ್ಥಾನಗಳಲ್ಲಿ ಈ ಪ್ರಯೋಗ ವಿರಳವಾಗಿಯಾದರೂ ಕಾಣಿಸಿಕೊಂಡಿರುವುದು ಮತ್ತೊಂದು ಗಮನಾರ್ಹವಾದ ಅಂಶವಾಗಿದೆ.''[೬] ಈ ಮೂರು ರೂಪುಗಳು ಬರುವ ಸಂದರ್ಭಗಳನ್ನು ಪರಿಶೀಲಿಸಿದ ಲೇಖಕರು'ಏನಿ' ಎಂಬುದು ಶ್ರೋತೃಗಳ ಗಮನ ಸೆಳೆಯುವುದಕ್ಕಾಗಿ 'ಗಡಿಂ' ಎಂಬುದು ಅನೇಕ ಶ್ರೋತೃಗಳನ್ನು ನೇರವಾಗಿ ಉದ್ದೇಶಿ ಹೇಳುವುದಕ್ಕಾಗಿ, 'ರೀ' ಎಂಬುದು ಅವ್ಯಯಗಳಿಗೆ ಸೇರಿ ಸಂಭೋದನ ವಿಭಕ್ತಿ ಅರ್ಥವನ್ನು ಕೊಡುವುದಕ್ಕಾಗಿ ಬಂದಿವೆ ಎಂದು ತೀರ್ಮಾನ ಮಾಡುತ್ತಾರೆ.ತಿ.ನಂ.ಶ್ರೀ ಅವರು ಅಂತಿಮದಲ್ಲಿ 'ಆಕ್ಸ್‌ಫರ್ಡ್ ಇಂಗ್ಲೀಷ್ ಡಿಕ್ಷನರಿ'ಯ ಬಗೆಗೆ ಮಾತನಾಡಲು ಇಷ್ಟಪಟ್ಟಿದ್ದಾರೆ. ಆಕ್ಸ್‌ಫರ್ಡ್ ನಿಘಂಟಿಗಿಂತ ಮೊದಲೇ 'ವೆಬ್‌ಸ್ಟೆರ್‌ನಿಘಂಟು' ಮತ್ತು 'ಸೆಂಚುರಿ ನಿಘಂಟು'ಗಳಿದ್ದರೂ ಪರಿಪೂರ್ಣ ಪ್ರಯೋಗದಲ್ಲಾಗಲಿ ಸಮಗ್ರತೆಯಲ್ಲಾಗಲಿ ಆಕ್ಸ್‌ಫರ್ಡ್ ನಿಘಂಟಿನ ಹತ್ತಿರ ಬರದಂತವುಗಳಾಗಿದ್ದವು. ಈ ನಿಘಂಟಿನ ರಚನೆಗಾಗಿ ಇಡೀ ಇಂಗ್ಲೀಷ್ ಸಾಹಿತ್ಯವನ್ನು ಶೋಧಿಸಲಾಯಿತು. ಅಲ್ಲಿಂದ ಶಬ್ದ ಶಬ್ದಕ್ಕೂ ಪ್ರಯೋಗಗಳನ್ನು ಕೊಡಬೇಕಾಯಿತು. ಈ ನಿಘಂಟಿನ ತಯಾರಿಕೆಗೆ ಬಳಸಿಕೊಳ್ಳದ ಪುಸ್ತಕ, ಭಾಷಣ, ಪತ್ರಿಕೆಗೆ ವರದಿ, ಶಾಸ್ತ್ರ ಗ್ರಂಥಗಳು, ಸಾಹಿತ್ಯ ಕೃತಿಗಳು ಇರಲ್ಲಿ.ಸಂಬಳ ಪಡೆದ ಯಾರೂ ನಿಘಂಟಿನ ಕೆಲಸ ಮಾಡಲಿಲ್ಲ.ಬದಲಾಗಿ ಭಾಷೆಯ ಅಭಿಮಾನದಿಂದ ಸಾವಿರಾರು ಖಾಸಗಿ ವ್ಯಕ್ತಿಗಳು ಕೆಲಸ ಮಾಡಿದರೆಂದರೆ ಅಭಿಮಾನ ಪಡಬೇಕು. ಒಂದು ಶಬ್ದದ ಚರಿತ್ರೆಯನ್ನು ತಪ್ಪಿಲ್ಲದಂತೆ ನಿರ್ಣಯಿಸಲು ಕಾಲ ಮಿತಿ ಇರಲಿಲ್ಲ ಉದಾ :Set ಎಂಬ ಪದ ದಲ ವ್ಯವಸ್ಥೆಗೆ ಒಂಬತ್ತು ತಿಂಗಳು ಕೆಲಸ ಹಿಡಿಯಿತಂತೆ.

---

೬. ತಿ.ನಂ.ಶ್ರೀ: ಸಮಾಲೋಕನ, ಶೃಂಗಾರ ಪ್ರಕಾಶನ, ೧೯೯೯, ಪುಟ ೨೬೨

ಈ ಮಹಾಕಾವ್ಯಕ್ಕೆ ಪ್ರಥಮ ಸೂತ್ರಧಾರ ಜೆ.ಎ.ಮರೆ ಈತ ತನ್ನ ಸಂಪಾದಕತ್ವದಲ್ಲಿ ನಿಘಂಟಿನ ಅರ್ಧಭಾಗವನ್ನು ಸ್ವಂತವಾಗಿ ಸಂಪಾದಿಸಿದ್ದನು. ಆಕ್ಸ್‌ಫರ್ಡ್ ನಿಘಂಟಿಗೆ'ಮರೆಯ ನಿಘಂಟು' ಎಂಬ ಇನ್ನೊಂದು ಹೆಸರೂ ಇದೆ. ಈ ಕಾಲವಾದ ಮೇಲೆ ಎಫ್.ಎಚ್.ಬ್ರಾಡ್ಲೆ, ಎ.ಕ್ರೇಗಿ, ಸಿ.ಟಿ.ಅನಿಯನ್ಸ್ ಎಂಬುವರು ಸಂಪಾದಕರಾಗಿ ನಿಘಂಟು ಪೂರ್ಣಗೊಂಡಿತು. ಸುಮಾರು ಮುಕ್ಕಾಲು ಶತಮಾನಗಳ ಕಾಲದ ನಡೆದ ಭೀಮಸಾಹಸವನ್ನು ನಿರ್ವಹಿಸಿರುವ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ಒಂದು ಕೀರ್ತಿ ಪತಾಕೆ ಎಂದು 'ಟೈಮ್ಸ್' ಪತ್ರಿಕೆಯವರು ಹೊಗಳಿದರು ಎಂದು ಲೇಖಕರು ಉಲ್ಲೇಖಿಸುತ್ತಾರೆ. ಆಕ್ಸ್‌ಫರ್ಡ್ ನಿಘಂಟು ರಚನೆಯ ಚರಿತ್ರೆಯನ್ನು ಅವಲೋಕಿಸಿದರೆ 'ಟೈಮ್ಸ್ ' ಪತ್ರಿಕೆಯವರು ಹೊಗಳಿರುವುದರ ಔಚಿತ್ಯವೆನೆಂದು ತಿಳಿಯುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಸಮಾಲೋಕನದ ಎಲ್ಲಾ ಲೇಖನಗಳು ವಿಮರ್ಶಕವಾಗಿಲ್ಲ.ಬಹಳಷ್ಟು ಲೇಖನಗಳು ಸಂಶೋಧನೆ ಮೀಸಲಾಗಿವೆ.'ಇಂಗ್ಲೀಷ್ ಗೀತಗಳು' ಲೇಖನ ಸತ್ವಪೂರ್ಣವಾಗಿದೆ. ಬೇಂದ್ರೆಯವರ 'ಗರಿ' ಮತ್ತು 'ಸಖೀಗೀತ'ಗಳನ್ನು ಚರ್ಚೆ ಮಾಡಬಹುದಿತ್ತು ಎನಿಸುತ್ತದೆ.

## ದ್ರೌಪದಿಯ ಶ್ರೀಮುಡಿ

'ದ್ರೌಪದಿಯ ಶ್ರೀಮುಡಿ' ಕೃತಿಯಲ್ಲಿ ಕುವೆಂಪುರವರು ದ್ರೌಪದಿಯ ಶ್ರೀಮುಡಿ ಎಂಬ ಲೇಕನದಲ್ಲಿ ಕನ್ನಡ ಸಾಹಿತ್ಯದ ಮಹಾಕವಿಗಳಾದ ಪಂಪ ಮತ್ತು ಕಮಾರವ್ಯಾಸನ ಕಾವ್ಯದಲ್ಲಿ ಬರುವ ದ್ರೌಪದಿಗೆ ಅವಮಾನಿತವಾದ ಸಂದರ್ಭಗಳನ್ನು ಹೋಲಿಸುತ್ತ, ವಿಮರ್ಶಿಸುತ್ತ ಹೋಗುತ್ತಾರೆ. ಆದಿಕವಿ ಪಂಪನ ಮಹಾಕೃತಿ 'ವಿಕ್ರಮಾರ್ಜುನ ‐ವಿಜಯ' ಮತ್ತು ಕುಮಾರವ್ಯಾಸ 'ಕರ್ನಾಟಕ ಭಾರತ ಕಥಾಮಂಜರಿ' ಕೃತಿಗಳೆರಡೂ ಮಹಾ ಭಾರತ ಕಥಾವಸ್ತುಗಳನ್ನು ಆಯ್ಕೆ ಮಾಡಿಕೊಂಡು ರಚಿತವಾದ ಕೃತಿಗಳಾಗಿವೆ. ಮಹಾಭಾರತದ ಯುದ್ದಕ್ಕೆ ಕಾರಣಳಾದ ದ್ರೌಪದಿಯ ಮುಡಿಯನ್ನು ಎಳೆದ ಸಂದರ್ಭವನ್ನು ವಿಮರ್ಶಿಸುತ್ತ ಕುವೆಂಪು ಹೀಗೆ ಹೇಳುತ್ತಾರೆ "ಕನ್ನಡ ಸಾಹಿತ್ಯರಂಗದಲ್ಲಿ ದ್ರೌಪದಿಯ ಶ್ರೀಮುಡಿಗೆ ಕೈಯಿಟ್ಟ ನಾಲ್ವರು ಸಮರ್ಥರಲ್ಲಿ ಇಬ್ಬರು ಮಹಾಕಲಿಗಳು, ಇನ್ನಿಬ್ಬರು ಮಹಾಕವಿಗಳು ಭೀಮ ದುಶ್ಯಾಸನ; ಪಂಪ ನಾರಣಪ್ಪ' ಒಬ್ಬ ಮುಡಿ ಬಿಚ್ಚಿದ ಕಲಿ, ಇನ್ನೊಬ್ಬ ಮುಡಿ ಕಟ್ಟಿದ ಕಲಿ"[೧] ಪಂಪನದು ಹಿತಮಿಚ ಮೃದುವಚನ. ಹೇಳುವುದನ್ನು ಸಂಕ್ಷಿಪ್ತವಾಗಿ ಒಂದು ಪದ್ಯದಲ್ಲಿ ಹೇಳಿ ಮುಗಿಸುತ್ತಾನೆ, ಆದರೆ ನಾರಣಪ್ಪ ಸಂಕ್ಷಿಪ್ತ ವಿಷಯವನ್ನು ವಿವರವಾಗಿ ಹೇಳುತ್ತಾನೆ. ಅಂದರೆ ಪಂಪ ದ್ರೌಪದಿಯ ಅವಮಾನಿತವಾದ ಸಂದರ್ಭವನ್ನು ಹತ್ತು ಹನ್ನೆರಡು ಗದ್ಯದ ಮತ್ತು ನಾಲ್ಕೇನಾಲ್ಕು ಪದ್ಯದ ಪಂಕ್ತಿಗಳಲ್ಲಿ ವರ್ಣಿಸಿ ಪೂರೈಸಿದರೆ, ನಾರಣಪ್ಪ

---

೧. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೫೭ : ಪುಟ ೧

ಅದೇ ವಿಷಯವನ್ನು ಯಾವುದನ್ನೂ ಬಿಡದೆ ಸುಮಾರು ಐವತ್ತು ಷಟ್ಪದಿಗಳಲ್ಲಿ ವಿಸ್ತರವಾಗಿ ಹೇಳುತ್ತಾನೆ, ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು ಎಂದಿದ್ದ ಕುವೆಂಪು ಅದು ಕುಮಾರವ್ಯಾಸನು 'ನಾರಣಪ್ಪ' ಎಂದು ಕರಯುತ್ತಾರೆ.

ನಾರಣಪ್ಪ ದ್ರೌಪದಿಯ ಕೂದಲನ್ನು ಶ್ರೀಮುಡಿ ಎನ್ನುತ್ತಾನೆ. ಆದರೆ ಪಂಪನಿಗೆ ಕೃಷ್ಣೆಯ ಕೃಷ್ಣ ಕಬರೀಭಾರ ನಾರಣಪ್ಪನಿಗೆ ತೋರುವಂತೆ ಶ್ರೀಮುಡಿ ಆಗಿರುವುದಿಲ್ಲ. ಅದಕ್ಕೆ ರಾಜಸೂಯಯಾಗದ ಸಂದರ್ಭದಲ್ಲಿ ತೀರ್ಥಜಲಾಭಿಷೇಕ ಆಗಿಲ್ಲ.ಮುನಿವರ್ಯರ ಮಂತ್ರ ಘೋಷದಿಂದ ಪವಿತ್ರವೂ ಆಗಿಲ್ಲ. ದುಶ್ಯಾಸನನು ಅದನ್ನು ಹಿಡಿದಾಗ ಅದರಿಂದ ಮುಂದೆ ಒದಗುವ ಕೇಡನೇನೊ- ಸೂಚಿಸುತ್ತಾನೆ

ಆ ಕೇಡು ಲೌಕಿಕ ಅಪರಾಧಕ್ಕೆ ಬದಗುವ ಶಿಕ್ಷೆಯ ರೂಪದ್ದೆ ಹೊರತು ಪಾಪರೂಪದ ಮಹಾಪಾತಕಕ್ಕೆ ಒದಗುವ ಉಗ್ರತಮ ಧರ್ಮದಂಡಲ್ಲ ಅಲ್ಲ ಎಂದು, ಕುವೆಂಪು ಅಭಿಪ್ರಾಯ ಪಡುತ್ತಾರೆ.

ಪಂಪನದು ಸಂಗ್ರಹಶೀಲೆಯಾದ ಸಂಸ್ಕೃತ ಕಲೆಯಾದರೆ, ನಾರಣಪ್ಪನದು ಗ್ರಾಮೀಣ ದೈತ್ಯಕಲೆ. ಆದುದರಿಂದ ನಾರಣಪ್ಪನಲ್ಲಿ,ಪಂಪ ಭಾರತದಲ್ಲಿರುವಂತೆ ನವುರು, ನಯಗಳನ್ನು ಕಾಣಲಾಗುವುದಿಲ್ಲ, ಪಂಪ ರಾಜಾಶ್ರಯದಲ್ಲಿದ್ದ ಕವಿಯಾದ್ದರಿಂದ ರಾಜನ ಋಣವನ್ನು ತೀರಿಸುಲು 'ವಿಕ್ರಮಾರ್ಜುನ ವಿಜಯ' ವನ್ನೂ, ಜೈನಮತಸ್ಥನಾದ್ದರಿಂದ 'ಆದಿಪುರಾಣ' ಗ್ರಂಥವನ್ನು ಬರೆದನು. ಅಂದರೆ ಲೌಕಿಕ ಮತ್ತು ಧಾರ್ಮಿಕ ಎಂಬ ಇಬ್ಭಾಗವನ್ನು ಪಂಪನಲ್ಲಿ ಕಾಣುತ್ತೆವೆ. ಆದರೆ ನಾರಣಪ್ಪ ತನ್ನ ಮಹೋನ್ನತಿಯನ್ನು ಲೌಕಿಕ ಮತ್ತು ಆಗಮಿಕ ಎಂದು ಎರಡು ಭಾಗವಾಗಿ ಹಂಚಿಲಿಲ್ಲ. ಅವನಿಗೆ ಕೃ ತಿ ಜೀವನೋದ್ದೇಶ ಸರ್ವಸ್ವಕ್ಕೂ ಮಾರ್ಗವಾದ ಪವಿತ್ರಸಾಧನೆಯಾಗಿತ್ತು,ನಾರಣಪ್ಪನಿಗೆ ತನ್ನ ಕೃತಿ ಲೌಕಿಕ, ಆಗಮಿಕ, ವ್ಯಾವಹಾರಿಕ ಎಲ್ಲವನ್ನೂ ಒಳಗೊಂಡ ಅಖಂಡಕೃತಿ. ಕಾವ್ಯದಲ್ಲಿ ರಸವೊಂದು ಆಸ್ವಾದನೆಗೆ ಸಲ್ಲದು,ದೈವೋಪಾಸನೆಯೂ ಅಲ್ಲಿ ಅವಿಭಕ್ತ ಉದ್ದೇಶವಾಗುತ್ತದೆ, " ಅವನು ದ್ರೌಪದಿಯ ಮುಡಿಯನ್ನು ಸಿರಿಮುಡಿ ಎಂಬ ವಿಶೇಷಣದಿಂದ ಕರೆಯುವುದಕ್ಕೆ ಬದಲಾಗಿ ಶ್ರೀಮುಡಿ ಎಂಬ ವಿಶೇಷಣವನ್ನೊಡ್ಡಿ ಧ್ವನಿಯಿಂದ ಅದನ್ನು ಪವಿತ್ರತರವಾಗಿ ಮಾಡಿದ್ದಾನೆ"[೧] ಎನ್ನುತ್ತಾರೆ ಕುವೆಂಪು.

ಹೀಗೆ ನಾರಣಪ್ಪನ ಕೃತಿಯನ್ನು ವಿಮರ್ಶಿಸುತ್ತ ಹೋಗುವ ಕುವೆಂಪು ದುಶ್ಯಾಸನನು ದ್ರೌಪದಿಯನ್ನು ಕರೆಯಲು ಬಂದ ಸಂದರ್ಭವನ್ನು ವಿವರಿಸುತ್ತಾರೆ. "ಎಲೆಗೆ, ಗರುವತವಿದು ಹಿಂದೆ ಸಲುವುದು. ಸಲ್ಲದಿರು ಕುರುರಾಜ ಭವನದಲ್ಲಿ. ಇಂದು ಮೆರೆದಿರೆ , ನಮ್ಮ ತೊತ್ತಿರ ಮುಂದೆ ಮೆರೆ,ನಡೆ, ಮಂಚದಿಂದಿಳಿ "[೨] ಎನ್ನುತ್ತಾನೆ ದುಶ್ಯಾಸನ ಅದಕ್ಕೆ ದ್ರೌಪದಿಯು ತಾನು ಪುಷ್ಪವತಿಯಾಗಿರುವುದಾಗಿಯೂ ರಾಜಸಭೆಗೆ

---

೧. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೬೭ : ಪುಟ ೪
೨. ಅದೇ ಪುಟ ೫

ಪ್ರವೇಶಿಸುವುದು ಸರಿಯಲ್ಲವೆಂದು ಉತ್ತರ ಕೊಡುತ್ತಾಳೆ. ಆಗ ಅವನು ಅತ್ಯಂತ ಗ್ರಾಮ್ಯವಾಗಿ ಗದರುತ್ತಾನೆ "ಎಲ್ಲಿಯದು ದುಷ್ಪಶ್ನೆ? ಮರುಮೊತಲ್ಲಿಯದು. ನೀ ಪುಷ್ಪವತಿಯಾಗು, ಅಲ್ಲಿ ಫಲವತಿಯಾಗು ನಡೆ ಕುರುರಾಜಭ ವನದಲಿ"[೪] ಎಂದು ಕಿರಾತರೂ ನಾಚುವಂತೆ ನುಡಿದು ಭಾರತ ಸಂಗ್ರಾಮಕ್ಕೆ ರೂಪಿಣಿಯಾದ ಕೃಷ್ಣೆಯ ಮುಡಿಯ ಕೃಷ್ಣೋರಗಕ್ಕೆ ಕೈ ತುಡುಕುತ್ತಾನೆ. ಇಲ್ಲಿ ನಾರಣಪ್ಪನು ಸಂಸ್ಕೃತ ಭಾಷೆಯ ಬಳಸಿದ್ದನ್ನು, ಕುವೆಂಪು ಆ ಸಂದರ್ಭವನ್ನು ಧ್ವನಿಪೂರ್ಣ ಮಾಡಲು ಸಂಸ್ಕೃತ ಮಯವಾದ ಭಾಷೆ ಅನಿವಾರ್ಯ ಎಂಬುದನ್ನು ಒಪ್ಪುತ್ತಾರೆ. ದ್ರೌಪದಿಯ ಮುಡಿಯನ್ನು ಶ್ರೀಮುಡಿ ಎಂದು ಕರೆದುದಕ್ಕೆ "ದ್ರೌಪದಿಯ ತುರುಬಿಗೆ ಈ ಆಡಂಬರವೇಕೆ ? ಕನ್ನಡ ಶಾರದೆಯ ಮೂರಂಗುಲದ ಮೂಗಿಗೆ ಮೊಳದುದ್ದದ ಈ ಸಂಸ್ಕೃತ ಮೂಗುತಿಯೇಕೆ"[೫] ಎಂಬ ವಿಮರ್ಶ ಮಾತನ್ನು ಉಲ್ಲೇಖಿಸುತ್ತ, ಆ ಮುಡಿ ಬರಿಯ ಕೂದಲುಂಡೆಯಲ್ಲ, ಆ ಕೂದಲು ಯಃಕಶ್ಚಿತ ಸ್ತ್ರೀಯೊಬ್ಬಳದ್ದಲ್ಲ, ಅದು ಸಿರಿಮುಡಿ ಮಾತ್ರವಿಲ್ಲ ಶ್ರೀಮುಡಿಯೂ ಅಹುದು ಎಂದು ಹೊಗಳುತ್ತಾರೆ.

ಮುಂದೆ ಸಭೆಯಲ್ಲಿ ನಡೆದ ಘಟನಾಪರಂಪರೆಗಳನ್ನು ಅಂದರೆ ದುರ್ಯೋಧನನ ಕ್ರೂರ ವಚನ, ದ್ರೌಪದಿಯ ಪ್ರಾರ್ಥನೆ, ದ್ರೌಪದಿಯು ದುರ್ಯೋಧನನಿಗೆ "ನಿನ್ನಳಿವು ತೊಡೆಯಲಿ ಘಟಿಸಲು"[೬] ಎಂದು ಶಪಿಸುವ ರೀತಿ, ಅದಕ್ಕೆ ಭೀಮನ ರುದ್ರಪ್ರತಿಕ್ರಿಯೆ ಭೀಮ ದುಶ್ಯಾಸನರ ಮಲ್ಲಯುದ್ಧ, ಭೀಮನು ದುಶ್ಯಾಸನನ ರಕ್ತ, ಮಾಂಸಗಳಿಂದ ಶೃಂಗಾರ ಮಾಡಿದ ಸಂದರ್ಭಗಳನ್ನು ಕುವೆಂಪು ಪದ್ಯಗಳನ್ನು ನಿದರ್ಶವಾಗಿ ಕೊಟ್ಟು ವಿಶ್ಲೇಷಣೆಗೆ ಒಳಪಡಿಸುತ್ತಾರೆ.

## ಯಶೋಧರ ಚರಿತೆ ಯಲ್ಲಿ ಕಾಮವಿಕಾರ ನಿರೂಪಣೆಯ ಉದ್ದೇಶ

ಕುವೆಂಪು ಕನ್ನಡ ಸಾಹಿತ್ಯದ ಮಹಾಕವಿಗಳಿಂದ ಪಂಪ ಮತ್ತು ನಾರಣಪ್ಪನ ಕೃತಿಗಳಲ್ಲಿ ದ್ರೌಪದಿಯ ವಸ್ತ್ರಾಪಹರಣದ ಸನ್ನಿವೇಶವನ್ನು ಎತ್ತಿಕೊಂಡು ದುಶ್ಯಾಸನ ದ್ರೌಪದಿಯ ಮುಡಿಯನ್ನು ಹಿಡಿದೆಳೆದ ಸಂದರ್ಭವನ್ನು ತೌಲನಿಸಿ ವಿಮರ್ಶಿಸಿದ ನಂತರ ಮತ್ತೊಬ್ಬ ಮಹಾಕವಿ, ಕವಿಚಕ್ರವರ್ತಿ ಜನ್ನನ 'ಯಶೋಧರ ಚರಿತೆ'ಯಲ್ಲಿ ಕಾಮವನ್ನು ವಿಕಾರವಾಗಿ ನಿರೂಪಣೆ ಮಾಡಿದ ಕವಿಯ ಉದ್ದೇಶವನ್ನು ವಿವರಿಸುತ್ತಾರೆ.

'ಯಶೋಧರ ಚರಿತೆ'ಯಲ್ಲಿ ಮುಖ್ಯ ಪಾತ್ರಧಾರಿಗಳಾದ ಅಭಿರುಚಿ ಮತ್ತು ಅಭಯಮತಿಯರು ಕಥೆಯನ್ನು ಪ್ರಾರಂಭಿಸುತ್ತಾರೆ ರುದ್ರಭಯಕಂರ ಸನ್ನಿವೇಶದೊಂದಿಗೆ ಕಥೆ ಪ್ರವೇಸಿಕೆಯನ್ನು ಪಡೆಯುತ್ತದೆ. ಮಾರಿದತ್ತ ರಾಜನ ಚಿತ್ರವನ್ನು ಕೊಟ್ಟು ಮೈ ನಡುಗಿಗುವಂತಹ ಸನ್ನಿವೇಶವನ್ನು ಸೃಷ್ಟಿ ಸುತ್ತಾನೆ . ಆದರೆ ಅದೇ ಸನ್ನಿವೇಶದಲ್ಲಿ ಸ್ವಲ್ಪವೂ ಧೈರ್ಯಗೆಡದೆ ಮಾರಿದತ್ತನಿಗೆ ಶಾಂತಿನ್ನು ಬೋಧಿಸುವ ಮಕ್ಕಳಿಬ್ಬರ

೪. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೬೭ : ಪುಟ ೫
೫. ಅದೇ ಪುಟ ೧
೬. ಅದೇ ಪುಟ ೮

ಭವ್ಯನೋಟವನ್ನು ಜನ್ನ ಕೊಡುತ್ತಾನೆ . ಹೀಗೆ ಹೇಳಿ '' ಹಿಂಸಾರಭಸಮತಿಗೆ ಸಯ್ಯಾ ಪೇಲ್ದು ಧರ್ಮಕ್ಕೆ ತಂದೀ ಶುಭ ಕಥನಮನ್ ''[೬] ಎಂದು ಕಾವ್ಯದ ಉದ್ದೇಶ ಹೇಳಿತ್ತಾನೆ.

' ಯಶೋಧರ ಚರಿತ್ರೆ ' ಯಲ್ಲಿ ಬಹಳಷ್ಟು ವಿಮರ್ಶಕರ ಕಣ್ಣು ಬೀಳು ಪ್ರಸಂಗವೆಂದರೆ ಯಶೋಧ ಅಮೃತಮತಿಯರ ದಾಂಪತ್ಯಜೀವನ ಮತ್ತು ಅಮೃತಮತಿ ಕಾಲು ಜಾರಿ ಬೀಳುವ ಪ್ರಸಂಗ. ಕುವೆಂಪು ಈ ಸನ್ನಿವೇಶವನ್ನು ವಿವೇಚನೆಗೆ ಎತ್ತಿಕೊಂಡು , ಸಾಮಾನ್ಯವಾಗಿ ಕಾಲುಜಾರಿ ಬೀಳುವ ವ್ಯಕ್ತಿಯ ಬಗೆಗೆ, ಸಹಾನುಭೂತಿ ತೋರುವುದು ಸಹಜ. ಆದರೆ ಪಾಶ್ಚಾತ್ಯ ವಿಮರ್ಶ ವಿಧಾನವನ್ನು ಅಭ್ಯಾಸ ಮಾಡಿರುವ ಕೆಲವರು ಪತಿತ ಪಾತ್ರ ವಿಚಾರದಲ್ಲಿ ಅನುಕಂಪ ತೋರಿಸುವುದುಂಟು ಆದರೆ ಪತಿತತ ಪಾತ್ರಗಳಿಗೆಲ್ಲ ಒಂದೇ ಸಮವಾಗಿ ಅನುಕಂಪ ತೋರಿಸುವುದು ಸಾಧ್ಯವೇ ಯುಕ್ತವೆ ಎಂದು ಕುವೆಂಪು ವಿಚಾರಮಾಡುತ್ತಾರೆ. ಅವರ ಪ್ರಕಾರ ಕಾಲುಜಾರಿ ಬೀಳುವ ವ್ಯಕ್ತಿ 'ಮಹಾನುಭಾವ' ಲಕ್ಷಣಗಲನ್ನು ಹೊಂದಿದವನಾಗಿದ್ದು ತನ್ನಲಿರುವ ಯಾವುದೇ ಒಂದು ಕುಂದಿನಿಂದ ಅಥವಾ ವಿಧಿಯ ಕಪಿ ಮುಷ್ಠಿಗೆ ಸಿಲುಕಿ ಆಹುತಿಯಾಗಿ ದುರಂತೆತೆಯನ್ನು ಪಡೆದರೆ ಆತನಿಗೆ ನಾವು ಅನುಕಂಪ ತೋರಿಸಬಹುದು ಆದರೆ ತಾನೇ ಇಚ್ಛಿಸಿ ಅಧಃಪತನಕ್ಕೆ ಇಳಿಯುತ್ತಿರುವಾಗ ತನ್ನ ಅಧ ಪತನವನ್ನು ಅರಿತಿದ್ದು ಅದನ್ನು ತಡೆಯಲು ಪ್ರಯತ್ನಿಸದೆ ಅತ್ತಅತ್ತಲೆ ಸಂತೋಷದಿಂದ ಜಾರುತ್ತಿರುವಾಗ ನಾವು ಅನುಕಂಪ ತೋರಿಸಲಾದೀತೆ? ತೋರಿಸುವುದು ಯುಕ್ತವೆ ? ಎಂದು ಪ್ರಶ್ನಿಸುವ ಕುವೆಂಪು ಮಹಾಭಾರತದಲ್ಲಿ ಭೀಮನ ಗದಾಪ್ರಹಾರಕ್ಕೆ ಗುರಿಯಾದ ವೀರನಾದ ದುರ್ಯೋಧನನ್ನು ಕಂಡು ನಾವು ಅನುಕಂಪ ತೋರಿಸಬಹುದು. ಆದೆರೆ ಮಹಾಭಾರತದ ಬುಡದಿಂದ ಕೊನಯವರೆಗೆ ಬರುವ ದುರ್ಯೋಧನನ ಪಾತ್ರವನ್ನು ಕುರಿತು ನೋಡಿದಾಗ ಅನುಕಂಪ ತೋರಿಸಿದರೆ ಅದು ಅನುಕಂಪೆಯಲ್ಲ ಹೃದಯ ದೌರ್ಬಲ್ಯವಾಗುತ್ತದೆ. ಎಂದು ಹೇಳುತ್ತಾರೆ.

ಅಮೃತಮತಿ ಮತ್ತು ಯಶೋಧರರಿಗೆ ಸಂಬಂಧಿಸಿದ ಕಾಲುಜಾರುವ ಪ್ರಸಂಗವನ್ನು ವಿವೇಚಿಸುವ ಕುವೆಂಪು ಯಶೋಧರ ಮತ್ತು ಅಮೃತಮತಿ ವ್ಯಕ್ತಿಗಳಲ್ಲಿ ಒಂದನ್ನು ಊರ್ಧ್ವಗಾಮಿ , ಇನ್ನೊಂದು ಅಧೋಗಾಮಿ ಎಂದು ಹೆಸರಿಸಿಸುತ್ತಾರೆ. ಅವರ ಪ್ರಕಾರ ಈ ಕಥೆಯನ್ನು ಪ್ರಯಣಕಥೆ ಎಂದು ಕರೆದರೆ ಅದು ಸತ್ಯವಾಗುವುದಿಲ್ಲ. 'ಹೃದಯದೌರ್ಬಲ್ಯ ಎಂದೂ ಹೆಸರಿಸದೆ, ರೋಗರೂಪ, ವಿಕಾರರೂಪ ಎನ್ನುತ್ತಾರೆ. ವಾಸ್ತವಜೀವನದಲ್ಲಿ ಇಂತಹದು ಅಸಂಭವನೀಯವಾದ ಅಥವಾ ಅತ್ಯಂತ ಅಪೂರ್ವವಾದ ಪ್ರಸಂಗ ''ಅಂತಹ ಅತಿವಿರಳ ಅಸಂಭವನೀಯ ಅಪೂರ್ವ ವಿಕಾರವೊಂದನ್ನು ಧರ್ಮವೇದಿಕೆಯ ಮೇಲಕ್ಕೆಳೆದು ತಂದು ಅದರ ಧರ್ಮಾಧರ್ಮಗಳನ್ನು ತೊಗಲೆಳೆಸುವುದು ತರ್ಕಬಾಹಿರ ''[೮]

---

೭. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೯೭ : ಪುಟ ೧೩

೮. ಅದೇ ಪುಟ ೧೫

ಅಮೃತಮತಿ ದಾರಿ ತಪ್ಪುವ ಪ್ರಸಂಗವನ್ನು ವಿವೇಚಿಸುತ್ತಾ ಸೋಮದೇವ ಸೂರಿಯ 'ಯಶಸ್ತಿಲಕ ಚಂಪುವಿನಲ್ಲಿ' ಅಮೃತಮತಿಗೆ ಗಂಡನನ್ನು ಕುರಿತು ಪ್ರೀತಿಯ ಇರಲಿಲ್ಲವೆಂಬ ಮಾತು ಬರುತ್ತದೆ. ಆದರೆ ಜನ್ನನ 'ಯಶೋಧರ ಚರಿತ್ರೆ'ಯಲ್ಲಿ ಈ ಬಗೆಯ ಸೂಚನೆ ಇಲ್ಲದಿರುವುದನ್ನು ಗುರುತಿಸಿದ ಕುವೆಂಪು ಯಶೋಧರ -ಅಮೃ ತಮತಿಯರ ಆದರ್ಶ ದಾಂಪತ್ಯದಲ್ಲಿ ಅಮೃ ತಮತಿ ಜಾರ ಬಹುದಾದ ಸೂಚನೆಯಾದರು ಎಲ್ಲಿ? ಎಂದು ಪ್ರಶ್ನಿಸುತ್ತಾರೆ. ಅಮೃ ತಸಮಾನವಾದ ದಾಂಪತ್ಯ ಸುಖದ ನಡುವೆ ಹೇಗೋ ನಡೆಯಿತು ಈ ಪವಾಡ. ಈ ವಿಧಿವಿಳಸನ! ವಿರಸವೇ ಇಲ್ಲದಿದ್ದ ದಾಂಪತ್ಯದಲ್ಲಿ ಇಂತಹ ವಿಕಾರಪ್ರವೃತಿಗಳೆಲ್ಲ ಯಾವುದು ನಡೆದೀತು ಯಾವುದು ನಡೆಯಲಾರದು ಎಂದು ಹೇಳುವುದು ಕಷ್ಟ. ಇಲ್ಲಿ ಜೈ ನಧರ್ಮಕ್ಕೆ ಸಹಜವಾದ ಪೂರ್ವಜನ್ಮದ ಕಾರಣವೊಂದನ್ನು ಕವಿ ಒದಗಿಸಬಹುದಾಗಿದ್ದತು. ಎಂದು ಕುವೆಂಪು ಹೇಳುತ್ತಾರೆ.

ಅಮೃತಮತಿಯು ತನ್ನ ಜಾರನಲ್ಲಿ ರೂಪವನ್ನು ಬಯಸಿದವಳಲ್ಲ ಆಕೆ ರೂಪಗಾಗಿ ಒಲಿದವಳಲ್ಲ "ದೂದಿ ಅವನು ಕಾಮದೇವನಂತಿದ್ದಾನೆ ಎಂದಾಗ ಓಹೋ! ಹಾಗೇನು? ಅದು ಇನ್ನೂ ಒಳ್ಳೆಯದೆ"[೯] ಎನ್ನುವಂತೆ ನುಡಿಯುತ್ತಾಳೆ. ಹೀಗಾಗಿ ಇಂತಹ ಪಾತ್ರವನ್ನು ಕುರಿತು ನಮ್ಮಲ್ಲಿ ಅನುಕಂಪ ಹುಟ್ಟುವುದಿಲ್ಲ ಅಸಹ್ಯ ಜಗುಪ್ಸೆಗಳು ಹುಟ್ಟುತ್ತವೆ. ಇಲ್ಲಿ ದುರಂತಪಾತ್ರದ ಹೆಸರನ್ನೆತ್ತುವುದೂ ಅಪರಾಧವೆಂದು ಕುವಂಪು ಅಭಿಪ್ರಾಯಪಡುತ್ತಾರೆ. ಅಮೃಮತಿಯ ಈ ವರ್ತನೆಯನ್ನು ಚಿತ್ರಿಸಲು ಜನ್ನ ಅವಳ ಮಾನಸಿಕ ಜಾಟಿಲ್ಯವನ್ನಾಗಲಿ ಆಕೆಯ ಜೀವನದ ಇತರ ಘಟನೆಗಳನ್ನಾಗಲಿ ಚಿತ್ರಿಸಿ ಈ ಒಂದು ಪ್ರಸಂಗವನ್ನು ಸ್ವಲ್ಪವಾದರೂ ಸಂಭವನೀಯವೆನಿಸುವಂತೆ ಮಾಡಬಹುದಿತ್ತು ಎನ್ನುತ್ತಾರೆ. ಈ ಮನೋರೋಗವಿಕಾರ ರೂಪವಾದ ಅಸಹಜತೆ ಆಗತ್ಯವಾಗಿದೆ. ಅಮೃಮತಿಯನ್ನು ಕಂಡು ನಾವು ಜುಗುಪ್ಸೆ ಪಡಬಲ್ಲೆವು ಅಸಹ್ಯ ಪಡಬಲ್ಲೆವು. ಆದರೆ ಅನುಕಂಪ ತೋರಿಸುವುದಿಲ್ಲ. ಒಂದು ವೇಳೆ ಅನುಕಂಪ ತೋರಿಸುವಂತಾಗಿದ್ದರೆ ಕವಿಯ ಉದ್ದೇಶ ಯಶಸ್ವಿಯಾಗಿ ನೆರವೇರುತ್ತಿರಲ್ಲ.

ಲೇಖನದ ಕೊನೆಯಲ್ಲಿ ಕುವೆಂಪುರವರ ಮಾತುಗಳು ಮೌಲಿಕವಾಗಿವೆ. ಅವರ ಪ್ರಕಾರ ಕಾವ್ಯದಲ್ಲಾಗಲಿ, ಬದುಕಿನಲ್ಲಾಗಲಿ ಪಾಪವನ್ನು ಸಮರ್ಥಿಸಿಕೊಂಡರೆ ಕೇಡಿಗೆ ದಾರಿಯಾಗುತ್ತದೆ. ಪಾಪಿಯೊಡನೆ ಮೈತ್ರಿ ಮಾಡಿಕೊಳ್ಳಬಾರದು . ಶಸ್ತ್ರಚಿಕಿತ್ಸೆಗೆ ಒಳಗಾದ ರೋಗದೊಡನೆ ಅನುಕಂಪ ತೋರಿದರೆ ದೇಹನಾಶವಾಗುತ್ತದೆ. ಅದೇ ರೀತಿ ನಮ್ಮ ಚೇತನದಲ್ಲರುವ 'ಅಮೃತಮತಿತತ್ವ'ಕ್ಕೆ ನಾವು ನಿಷ್ಠುರರೂ ನಿರ್ದಯಿಗಳೂ ಆಗದಿದ್ದರೆ' ಯಶೋಧರತ್ವ ಸಿಕ್ಕುವುದಿಲ್ಲ. ನಮ್ಮ ಅಷ್ಟಾವಂಕವೊಹತ್ವ! ಪಾಚಿ ಕಿಲುಬು ನಾಶವಾಗಿ , ಶುಚಿಯಾಗಿ 'ಅಮೃತಮತಿ'ಯಾಗಿ ತನ್ನ 'ಯಶೋಧರನನ್ನು ಮತ್ತೆ ಕೂಡಬಹುದು ಈ

---

೯. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೯೭ : ಪುಟ ೧೮

ದೃಷ್ಟಿಯಿಂದ ನೋಡಿದೆರೆ " ಕವಿಯ ಕ್ರೌರ್ಯ ಅವನ ಕರುಣಾ ಹಸ್ತದ ಒಂದು ನಖರೂಪ ಮಾತ್ರವಾಗಿ ತೋರುತ್ತದೆ.''[೧೦] ಎಂಬ ಕುವೆಂಪು ಮಾತು ಸತ್ಯವಾಗುತ್ತದೆ.

## ಶ್ರೀ ಕೃಷ್ಣಜನ್ಮಾಷ್ಟಮಿ

ಕುವೆಂಪು ರವರು ಶ್ರೀ ಕೃಷ್ಣನು ಹುಟ್ಟಿದ ಸಂದರ್ಭವನ್ನು ವರ್ಣಿಸುತ್ತಾರೆ ಘೋರ ಅಂಧಕಾರ ಕವಿದಿತ್ತು. ಮಿಂಚಿ ಸಿಡಿಲ್ಲಿನ ಶಬ್ದಕ್ಕೆ ಭೂಮಿಯೇ ನಡುಗಿತ್ತು . ಕೆರಳಿದ ಸಿಂಹದ ಗರ್ಜನೆಯಂತೆ ಭಯಂಕರವಾಗಿ ಗಾಳಿ ಬೀಸುತ್ತಿತ್ತು. ಮುಗಿಲು ಬಿಪ್ಪೊಡೆದಂತೆ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ಆಹಾ! ಎಂತಹ ಘೋರ ರಾತ್ರಿ! ಆದರೂ ಆ ರಾತ್ರಿಯನ್ನು ಕುವೆಂಪು ಅವರು ದಿವ್ಯರಾತ್ರಿ ಎನ್ನುತ್ತಾರೆ. ಏಕೆಂದರೆ ಈ ಭಯಂಕರವಾದ ಕಾಳರಾತ್ರಿಯಲ್ಲಿಯೇ ಉಜ್ವಲವಾದ ಪರಂಜ್ಯೋತಿ ಆವರಿಸಿತು. ಲೋಕಕ್ಕೆ ಶ್ರೀಮದ್ ಭಗವತ್ ಗೀತೆಯನ್ನು ಕೊಟ್ಟವನನ್ನು ಕೊಟ್ಟದು. ಈ ಧನ್ಯರಾತ್ರಿ ಅಂದೆರ ಶ್ರೀ ಕೃಷ್ಣಜನ್ಮಾಷ್ಟಮಿಯ ರಾತ್ರಿ! ಎಂದು ಭಕ್ತಿಪೂರ್ವಕವಾಗಿ ಈ ಪ್ರಸಂಗವ್ನ ವರ್ಣಿಸುತ್ತಾರೆ. ಅವರ ಪ್ರಕಾರ ಕ್ಲೇಶ,ಕಷ್ಟ, ಸಂಕಟ, ಕಣ್ಣೀರು ಇವೆಲ್ಲ ನಮ್ಮ ಹೃದಯದಲ್ಲಿ ಆವರಿಸಿ ದುಃಖದ ಸೆರೆಯಲ್ಲಿ ಸಿಕ್ಕು, ವ್ಯಾಕುಲದಿಂದ ಪ್ರಾರ್ಥಿಸಿ ಮೊರೆಯಿಟ್ಟಾಗಲೆ ಶ್ರೀಕೃಷ್ಣಜನ್ಮಾಷ್ಟಮಿಯಾಗುವುದು? ಎಂದು ಪ್ರಶ್ನಿಸುತ್ತಾರೆ. ಅವರ ಈಪ್ರಶ್ನೆಗೆ ಉತ್ತರವೆಂದರೆ ಜಗತ್ತಿನಲ್ಲಿ ಜನರು ಸಂಕಷ್ಟದಲ್ಲಿದ್ದಾಗ, ಅದರ ನಿವಾರಣೆಗಾಗಿ ಶ್ರೀಕೃಷ್ಣ ಹುಟ್ಟಿ ಬರುತ್ತಾನೆ ಎಂಬುದು.

ಪ್ರತಿಯೊಂದು ಲೋಕದಲ್ಲಿ ಪ್ರತಿ ಯುಗ, ದೇಶ, ಜನಾಂಗ ಕ್ಷಣದಲ್ಲಿ ಸಂಭವಿಸುವ ಗ್ಲಾನಿಯ. ಮಧ್ಯ ಭಗವಂತನು ಆವಿರ್ಭವಿಸಿ ಭಗವದಾಶಾಕಿರಣವನನ್ನು ಜಗತ್ತಿಗೆ ಹೆಸರಿಸುತ್ತಾನೆ. ಈ ನಿತ್ಯಾಸತ್ಯವನ್ನು ನಾವು ವರುಷ ವರುಷವೂ ಶ್ರೀ ಕೃಷ್ಣ ಜನ್ಮಾಷ್ಟಮಿಯಂದು ಅನುಶೀಲನೆ ಮಾಡಬೇಕು. ಇಲ್ಲದಿದ್ದರೆ ನಮ್ಮ ಪಾಲಿಗೆ ಇದು ಸ್ವಾರಸ್ಯಕರವಾದ ಕಟ್ಟುಕತೆಯಾಗಿ ಬಿಟುತ್ತದೆ. ''ಗೌರ್ಭೂತ್ವಾ ಅಶ್ರುಮುಖೀ ಸ್ವಿನ್ನಾಕ್ರಂದತೀಕರುಣಂ ವಿಭೋ ಉಪಸ್ಥಿತಾಂತಿಕೆ ತಸ್ಮವ್ಯಸನಂ ಸ್ವಂ ಅವೋಚತ ಎಂದು ಅಸುರಿಶಕ್ತಿಯ ಪೀಡೆಗೆ ಸಹಿಸದ ಭೂದೇವಿ ಗೋರೂಪಧಾರಣೆ ಮಾಡಿ ವಿಧಾಯನೆಡೆಗೆ ತೊಳಿ ಮೋರೆಯಿಟ್ಟಳು. ಆ ಮೊರೆಕೇಳಿದ ಜಗನ್ನಾಥನು ವಸುದೇವನ ಮನೆಯಲ್ಲಿ ಹುಟ್ಟಿ ಬರುತ್ತೇನೆಂದು ಆಶ್ವಾಸನೆ ಕೊಡುತ್ತಾನೆ.''[೧೧] ಎಂದು ಅಗ್ನಿ ಹಂಸದಿಂದ ಎತ್ತಿಕೊಂಡ ಮಾತನ್ನು ಕುವೆಂಪು ಉದ್ಧರಿಸುತ್ತಾರೆ. ಅವರ ಪ್ರಕಾರ ಕಂಸ ವಸುದೇವ ದೇವಕಿ ಇವರಲ್ಲಿ ಇಲ್ಲಿ ನಿಮಿತ್ತಮಾತ್ರರಾಗುತ್ತಾರೆ. ಕುವೆಂಪು ಪ್ರಕಾರ ಯಾವ ಲೌಕಿಕ ಮಹತ್ ಕಾರಣವಿಲ್ಲದೆ ಭಗವತ್ ಅವತರಿಸುವುದಿಲ್ಲ. ಅವನು ಅವತರಿಸಲು ಕಂಸನೋ ರಾವಣನೋ ನೆವವಾಗುತ್ತಾರೆ.

---

೧೦. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೯೭ : ಪುಟ ೨೪

೧೧. ಅದೇ ಪುಟ ೨೬

ನಿಜವಾಗಿಯೂ ಅವರನ್ನು ಕೊಲ್ಲಲ್ಲೆಂದು ಭಗವಂತ ಅವ ತರಿಸುತ್ತಾನೆಂಬುದು ಕೇವಲ ಕವಿಕಲ್ಪನೆಯಷ್ಟೆ ಅಲ್ಲದೆ ಸತ್ಯವಿಲ್ಲ. ಭಗವಂತನು ಅವತರಿಸಬೇಕಾದರೆ ಭೂಮವಾದ ಉದ್ದೇಶ ಇರಲೇಬೇಕೆನ್ನುತ್ತಾರೆ. ಕುವೆಂಪು ಮುಂದೆ ಕುವೆಂಪು ಶ್ರೀಕೃಷ್ಣನಜನ್ಮವೃತ್ತಾಂತವನ್ನು ವಿವರಿಸುತ್ತಾರೆ. ಅಂದೆರ ದೇವಕಿ ವಸುದೇವನ ವಿವಾಹ, ಕಂಸನಿಗೆ ಅಶರೀವಾಣಿಯಿಂದ ಆಘಾತ ಸುದ್ದಿ ಕೇಳಿಸಿದ್ದು, ತಂಗಿಯ ಮಕ್ಕಳನ್ನು ಕೊಲ್ಲಲು ಕಂಸನ ನಿರ್ಧಾರ ಶ್ರೀವಿಷ್ಣುವು ದೇವಕಿಯ ಗರ್ಭದಲ್ಲಿ ಅವತರಿಸಿದ್ದು ಮತ್ತು ಗೋಕುಲಕ್ಕೆ ತನ್ನನ್ನು ಕೆರೆದೊಯ್ಯಲು ಆದೇಶಿಸಿದ್ದು ರುದ್ರಭಯಂಕರ ಆ ರಾತ್ರಿಯಲ್ಲಿ ವಸುದೇವನು ಮಗುವನ್ನು ಗೋಕುಲಲ್ಲಿ ಬಿಟ್ಟು ಬಂದ ವಿವಣೆಯನ್ನು ಕೊಡುತ್ತಾರೆ.

ಶ್ರೀಕೃಷ್ಣನು ಜನ್ಮವೆತ್ತಿದ ಆರಾತ್ರಿ ಆಮತ ಈ ಮತ ಈ ಧರ್ಮ ಈ ದೇಶ ಈ ದೇಷ ಎನ್ನದೆ. ಎಲ್ಲರಿಂದಲ್ಲೂ ಎಲ್ಲಕಾಲಕ್ಕೂ ಗೌರವಕ್ಕೆ ಪ್ರಾತ್ರವಾಗಿರುವ 'ಭಗವದ್ಗೀತೆ'ಗೆ ಅಂಕುರ್ಪಣೆಯಾದ ದಿವ್ಯರಾತ್ರಿಯಾಗಿತ್ತು. ಈ ಸಂದರ್ಭವನ್ನು ವರ್ಣಿಸುವಾಗ ಕುವೆಂಪು ಅವರು "ದ್ವಾಪರಯುಗದ ಗರ್ಭದಿಂದ ಹೊಮ್ಮಿ ಕಲಿಯುಗದ ಹೃತ್‌ಕುಂದ್ರಕ್ಕೆ ಧುಮುಕುತ್ತಿರುವ ಆಕ್ಷೀರಜಲಪಾತದ ಪಾಂಚಜನ್ಯಘೋಷ ನಮ್ಮೆಲ್ಲರ ಪ್ರಾಣಗಳಲ್ಲಿ ಪ್ರತಿಸ್ವಂಧಿಸಿ ಅನುರಣಿತವಾಗಲಿ!"[೧೨] ಎಂದು ಉದ್ದೇಶಿಸುತ್ತ ತಮ್ಮ ಲೇಖನವನ್ನು ಮುಗಿಸುತ್ತಾರೆ.

## ಭಾಷೆ :ಲೋಕೋಪಯೋಗಿ ಮತ್ತು ಭಾವೋಪಯಾಗಿ

ಭಾಷೆ ಮನುಷ್ಯನ ಭಾವನೆಗಳನ್ನು ವ್ಯಕ್ತಪಡಿಸುವ ಮಾಧ್ಯಮ ಮಾತ್ರವಾಗಿರದೆ, ಬೇರೆ ಬೇರೆ ಉಪಯೋಗಗಳೂ ಭಾಷೆಗಿದೆ. ಇದನ್ನು ಗಮನಿಸದೆ ಕಾವ್ಯ ಅಥವಾ ಶಾಸ್ತ್ರವನ್ನು ಓದಿದರೆ ಅನೇಕ ತೊಂದರೆಗಳಿಗೆ ಒಳಗಾಗ ಬೇಕಾಗುತ್ತದೆ. ಭಾಷೆ ಮುಖ್ಯವಾಗಿ ಲೋಕೋಪಯೋಗಿಯಾಗಿ ಮತ್ತು ಭಾವೋಪಯೋಗಿಯಾಗಿ ಕೆಲಸ ಮಾಡುತ್ತದೆ. ಭಾಷೆ ಲೋಕೋಪಯೋಗಿಯಾದಾಗ ಅದು ಲೋಕ ಸಂವಾದವನ್ನು ನಿರೀಕ್ಷಿಸಿದರೆ, ಭಾವೋಪಯೋಗಿಯಾದಾಗ ಭಾವಸಂವಾದನ್ನೇ ಅಪೇಕ್ಷಿಸುತ್ತದೆ. ಭಾಷೆಯ ಈ ಉಪಯೋಗ ಸಾಹಿತ್ಯದಲ್ಲಿ ಮತ್ತು ಲೋಕದಲ್ಲಿ ಅನ್ವಯವಾಗುತ್ತದೆ. ಕುವೆಂಪು ಅವರ ಈ ಮಾತುಗಳು ಪಾಶ್ಚಾತ್ಯ ವಿಮರ್ಶಕ ಐ.ಎ. ರಿಚರ್ಡ್ಸ್ ಭಾಷೆ ಎರಡು ಉಪಯೋಗಗಳನ್ನು ನೆನಪಿಗೆ ತರುತ್ತವೆ.

ಭಾರತೀಯ ಕಾವ್ಯಮೀಮಾಂಸೆ ಬಹು ಪ್ರಾಚೀನಕಾಲದಲ್ಲಿಯೇ ಶಬ್ದಾರ್ಥ ಸ್ವರೂಪ ವಿಚಾರದಲ್ಲಿ ಶಬ್ದಕ್ಕೆ ಎರಡು ಅರ್ಥಗಳಿವೆ ಎಂಬುದನ್ನು ಕಂಡುಕೊಂಡಿದೆ. ಒಂದು 'ವಾಚ್ಯ' ಮತ್ತೊಂದು 'ಪ್ರತ್ಯೇಯಮಾನ'.ಇಲ್ಲಿ ಶಬ್ದಕ್ಕೆ ವಾಚ್ಯವಾದ ಅಥವಾ ನೇರವಾದ ಅರ್ಥವನ್ನು ಕೊಡುವ ವೃತ್ತಿ

---

೧೨. ಕುವೆಂಪು : ದ್ರೌಪದಿಯ ಶ್ರೀಮುಡಿ: ಉದಯರವಿ ಪ್ರಕಾಶನ :೧೯೯೭ : ಪುಟ ೩೧

ಲೋಕೋಪಯೋಗಿ ಪ್ರತೀಯಮಾನವಾದ ಅಥವಾ ಗಮ್ಯವಾದ ಅರ್ಥವನ್ನು ಕೊಡುವ ಶಕ್ತಿ ಭಾವೋಪಯೋಗಿದೆ. ಅಂದರೆ ಒಂದು ಪದಕ್ಕೆ ಒಂದೇ ಅರ್ಥವಿಲ್ಲ. ಅನೇಕಾರ್ಥಗಳೂ ಇವೆ ಎಂಬುದನ್ನು ಭಾರತೀಯ ಸಂದರ್ಭದಲ್ಲಿ ಕುವೆಂಪು ಒತ್ತಿ ಹೇಳುತ್ತಾರೆ.

ಕೋಪಗೊಂಡ ತಂದೆ, ತನ್ನ ಮಗನಿಗೆ 'ನಿನ್ನನ್ನು ಸುಳಿ ತೋರಣ ಕಟ್ತೇನಿ' ಎಂದಾಗ ಆ ಭಾಷೆ ಬರಿಯ ಭಾವೋಪಯೋಗಿ, ಅದು ಎಂದಿಗೂ ಲೋಕಸಂವಾದ ಒದಗುತ್ತದೆಂದು ಹೇಳಲಾಗದು. ಹಾಗೆಯೇ ಶೃಂಗಾರರಸ ಪ್ರಮುಖವಾದ ಕಡೆ ಭಾವೋಪಯೋಗಿ ಭಾಷೆ ತನ್ನ ಪರಾಕಾಷ್ಠೆಯನ್ನು ಮುಟ್ಟುತ್ತದೆ. ಅದು ಇಲ್ಲಿ ಲೋಕಸಂವಾದವಿರುವುದು ಅಪೂರ್ವ.

ಭಾವೋಪಯೋಗಿಯಾದ ಈ ಭಾಷೆಯ ಪ್ರಯೋಜನ ನಮ್ಮಲ್ಲಿ ಒಂದು ಭಾವವನ್ನೊ, ಚಿತ್ತ ಭಂಗಿಯನ್ನೊ ಪ್ರಚೋದಿಸುವುದಾದರೆ, ಅದಕ್ಕಿಂತ ಬೇರೇನನ್ನೂ ಮಾಡದಿದ್ದರೆ, ಕಾವ್ಯ ಪ್ರಯೋಜನ ಕೇವಲ ಹೃದಯ ವಿಲಾಸ ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ಬರಿಯ ಭಾವವಿಲಾಸವಿಲ್ಲದೆ ಇನ್ನಾವ ವಿಧವಾದ ವಸ್ತುಸಂವಾದವೂ ಅದಕ್ಕಿರುವುದೂ ಇಲ್ಲ. ಅದರಿಂದೊದಗುವ ಇಲ್ಲ ಎಂದು ಸಂದೇಹವನ್ನು ವ್ಯಕ್ತಪಡಿಸುತ್ತಾ ಕುವೆಂಪು ತಮ್ಮ ಲೇಖನವನ್ನು ಮುಗಿಸುತ್ತಾರೆ.

## ವಿಭೂತಿ ಪೂಜೆ

### ಶಕ್ತಿ ಕವಿ ರನ್ನ

ಮಹಾಕವಿ ರನ್ನನ ಬಗೆಗೆ ಕುವೆಂಪು ಅವರಿಗೆ ಅಪಾರ ಅಭಿಮಾನ. ಅವನನ್ನು ಮನದುಂಬಿ ಹಾಡಿ ಹೊಗಳುತ್ತಾರೆ. ಕನ್ನಡ ಸಾಹಿತ್ಯದ ಮಹಾಕವಿಗಳಲ್ಲಿ ರನನ್ನು ಪ್ರಧಾನತಃ 'ಶಕ್ತಿ' ಕವಿ ಎಂದಿರುವ ಲೇಖಕರು ಆತನಲ್ಲಿರುವ ಉದ್ದಾಮವಾದ ಇತರ ಕಾವ್ಯಗುಣಗಳು, ಇತರೆ ಶ್ರೇಷ್ಠ ಕವಿಗಳಿಲ್ಲದ್ದರೂ, ಅವನ ''ವಿಶಿಷ್ಟಗುಣವಾದ ಶಕ್ತಿ ಅದೇ ಪ್ರಮಾಣದಲ್ಲಿ ಆ ತೂಕದಲ್ಲಿ, ಆ ವೇಗದಲ್ಲಿ, ಆ ಮಿಂಚಿನಲ್ಲಿ ಮತ್ತೆಲ್ಲಿಯೂ ಲಭಿಸುವುದಿಲ್ಲ''[೧] ಎಂದು ನಿರ್ಧರಿಸುತ್ತಾರೆ. ರನ್ನನಿಗೆ ಅಂತಹ ಶಕ್ತಿ ಗುಣ ಒಂದಿಲ್ಲದಿದ್ದರೆ, ಮಹಾಕವಿಯ ಪಟ್ಟ ದುರ್ಲಭವಾಗುತ್ತಿತ್ತು ಎಂಬ ಸಂದೇಹವನ್ನು ಲೇಖಕರು ವ್ಯಕ್ತಪಡಿಸುತ್ತಾರೆ. ಆ ಶಕ್ತಿ ವಿಶೇಷ ಒಂದರಿಂದಲೇ ರನ್ನ ಬದುಕಿದ್ದಾನೆ, ಮಹಾಕವಿಯಾಗಿದ್ದಾನೆ ಮತ್ತು ಪಂಪ ನಾರಣಪ್ಪರ ನಡುವೆ ಹೆಗಲೆಣೆಯಾಗಿ ಹಣೆಯೆತ್ತಿ ನಿಂತಿದ್ದಾನೆಂಬುದು ಲೇಖಕರ ಅಭಿಪ್ರಾಯವಾಗಿದೆ.

ರನ್ನನ ಕೃತಿಗಳ ಬಗ್ಗೆ ಚರ್ವಿತ ಚರ್ವಣವೆಂದೂ, ಪೆಂಪೆಲ್ಲ ಪಂಪನುದು, ಹೆಸರಿಗೆ ರನ್ನ ಎಂದು ಆಕ್ಷೇಪಿಸುವವರು, ರನ್ನನ ಕೃತಿರತ್ನಯನ್ನು ಅಂದರೆ ಗದಾಯುದ್ಧವನ್ನು ಕೈಗೆತ್ತಿಕೊಳ್ಳಲಿ ಕೃತಿಯ ಯಾವ

೧. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೭

ಪುಟವನ್ನು ತೆರೆಯಲಿ, ಯಾವ ಸನ್ನಿವೇಶವನ್ನು ಗಮನಿಸಲಿ, ಯಾವ ವರ್ಣನೆಯನ್ನೇ ಆಲಿಸಲಿ, ಯಾವ ವೀರಾಲಾಪವನ್ನು ವಾಚಿಸಲಿ ಅದು 'ಶಕ್ತಿ' ಓದುಗನ ಹೃದಯದಲ್ಲಿ ವಿಹಾರಿಯಾಗಿಯೂ, ಪ್ರಾಣ ಸಂಚಾರಿಯಾಗಿಯೂ ಹರಿಯುತ್ತದೆ. ಯಾವ ಪ್ರಸಂಗವನ್ನೇ ಓದುತ್ತಿರಲಿ ಈ ಶಕ್ತಿಯ ಮಿಂಚು ಮೈಯೊಳಗೆ ಸಂಚರಿಸುತ್ತದೆ.

ಇಂತಹ ಧೀಮಂತ ಕವಿ ರನ್ನನಿಗೆ ಸಲ್ಲಬೇಕಾದ ಮರ್ಯಾದೆ, ಕಾಣಿಕೆ, ಪೂಜೆಗಳನ್ನು ಅರ್ಪಿಸಿದವರು ನವೋದಯ ಕಾಲದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು. ಇವರು ರನ್ನನ ಗದಾಯುದ್ಧ ಕಾವ್ಯದಿಂದ ಗದಾಯುದ್ಧ ನಾಟಕವನ್ನು ಬರೆದರು. ಅದುವರೆಗೂ ಮ್ಯುಕ್‌ಬೆತ್, ಹ್ಯಾಮ್ಲೆಟ್ ನಂತಹ ಇಂಗ್ಲಿಷ್ ನಾಟಕಗಳನ್ನು ಓದಿ, ನೋಡಿದವರು ಗದಾಯುದ್ಧ ನಾಟಕವನ್ನು ಕಂಡು ಬೆರಗಾದರು. ಪಾಶ್ಚಾತ್ಯ ವಿಮರ್ಶೆಯ ಒರೆಗಲ್ಲಿನಲ್ಲಿ ರನ್ನನು ಅಪರಂಜಿತನವನ್ನು ಪಡೆದುಕೊಂಡನು. ಹೀಗೆ ಗದಾಯುದ್ಧ ಕಾವ್ಯಕ್ಕೆ ದೃಶ್ಯರೂಪ ಒದಗಿದುದನ್ನು ಕುವೆಂಪು ಅವರು "ಅಪೂರ್ವವಾದ ಕಲ್ಯಾಣ ಘಟನ"[೨] ಎಂದು ಬಣ್ಣಿಸಿದ್ದಾರೆ. ಅಲ್ಲದೆ

"ರನ್ನನಿರುವ ಕನ್ನಡಕ್ಕೆ
ಅನ್ಯರಿಂದ ಬಹುದೆ ಧಕ್ಕೆ ?
ಬರಿಯ ಕವಿಯೇ ? ಸಿಡಿಲ ಚೆಕ್ಕೆ
ಸಿಡಿದು ಬಂತೋ ನಮ್ಮ ನಾಡ
ನುಡಿಯ ಪುಣ್ಯಕೆ !
ಬಿತ್ತು, ಕಾಣೊ, ದಿವ್ಯಾಗ್ನಿಯ
ಕಿಡಿ ಅರಣ್ಯಕೆ".[೩]

ಎಂದು ಅತ್ಯಭಿಮಾನದಿಂದ, ಮೆಚ್ಚುಗೆಯ ಮಾತನಾಡುವ ಕುವೆಂಪು ಈ ಲೇಖನವನ್ನು ಮುಗಿಸುತ್ತಾರೆ.

ಕಲಿಯದವರಿಗೂ ಕಾಮಧೇನು

ಕನ್ನಡ ಸಾಹಿತ್ಯ ಸುಮಾರು ಒಂದು ಸಾವಿರ ವರ್ಷಗಳಿಂದ ಬೆಳೆದು ಬಂದಿದೆ. ಈ ಸಾಹಿತ್ಯಕ್ಷೇತ್ರದಲ್ಲಿ, ಒಂದರಿಂದ ಒಂದಕ್ಕೆ ಸುಮಾರು 500 ವರ್ಷಗಳ ಅಂತರದಲ್ಲಿ ಎರಡು ಮಹಾ ಶಿಖರಗಳು ಶೋಭಿಸುತ್ತಿವೆ. ಅವೆರಡೂ ಒಂದರೊಡನೊಂದು ಹೊಯ್‌ಕಯ್ಯಾಗಿ ನಿಂತಿವೆ. ಆ ಮೇರೆ ಮಂದರ ಸದೃಶ್ಯರಾಗಿರುವ ಪಂಪ-ನಾರಣಪ್ಪರೆ ಎರಡು ಮಹಾಶಿಖರಗಳು, ಹಳಗನ್ನಡದ ಕವಿ ಪಂಪ ಕಲಿತವರಿಗೆ ಕಲ್ಪತರುವಾದರೆ ನಡುಗನ್ನಡದ ಕವಿ ನಾರಣಪ್ಪ ಕಲಿಯದವರಿಗೂ ಕಾಮಧೇನುವಾಗಿದ್ದಾನೆ. ಕರ್ನಾಟಕದ ಕವಿ ಜೀವನದ ಮೇಲೆ ಪಂಪನ ಪ್ರಭಾವವಿದ್ದರೆ ಜನಜೀವನದ ವೇದಿಕೆಯಲ್ಲಿ ನಾರಣಪ್ಪನೆ ಅಗ್ರಸ್ಥಾನಸ್ಥ ಮಹಾಧ್ಯಕ್ಷನಾಗಿದ್ದಾನೆಂದು ಲೇಖಕರು ಅಭಿಪ್ರಾಯಪಡುತ್ತಾರೆ. ನಾರಣಪ್ಪನ ಈ ಮಹತ್ತಿಗೆ ಅವನ

೨. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೧೧
೩. ಅದೇ ಪುಟ ೧೩

ಕಲ್ಪನಾಶಕ್ತಿ, ಭಾವಾವೇಗ, ಉಪಮಾರೂಪಕಾದಿಗಳ ರುದ್ರರಮ್ಯತೆ, ರುದ್ರನೃತ್ಯಶೈಲಿ, ಧರ್ಮದೃಷ್ಟಿ, ಆತನ ಭಗವತ್‌ಭಕ್ತಿ ಮತ್ತು ಋಷಿದರ್ಶನಗಳು ಕಾರಣವೆಂದು ಲೇಖಕರು ಗುರ್ತಿಸುತ್ತಾರೆ.

''ನಾರಣಪ್ಪನ ಕೃತಿ ಕಲೆಗಾಗಿ ಕಲೆಯಾಗಿರದೆ ರಸರೂಪಿ ವಿಶ್ವೇಶನ ಸಾಕ್ಷಾತ್ಕಾರಕ್ಕೆ ಸೋಪಾನವೂ, ಸಾಧನವೂ ಆಗಿದೆ''[೪]. ನಾರಣಪ್ಪನಿಗೆ ಭಾರತವೆಂದರೆ ಭಗವಂತನ ಲೀಲೆಯಾಗಿದೆ. ಶ್ರದ್ಧೆಯಿಂದ ಉದ್ದೀಪ್ತನಾಗಿ ಮಹಾಕಾವ್ಯವನ್ನು ಮಹತ್ತಾಗಿ ನಿರ್ವಹಿಸಿರುವ ನಾರಣಪ್ಪ ಬರಿಯ ಕವಿ ಅಲ್ಲ ರಸದರ್ಶಿಯೂ ಆಗಿದ್ದಾನೆ ಎನ್ನುತ್ತಾರೆ ಲೇಖಕರು.

ಲೇಖಕರು ತಮ್ಮ ಭಾಷಣವೊಂದರಲ್ಲಿ ಈ ವಿಚಾರವನ್ನು ಕುರಿತು ಮಾತನಾಡುತ್ತಿರುವುದರಿಂದ ದೀರ್ಘವಿವರಕ್ಕೆ ಕೈ ಹಾಕದೆ, ನಾರಣಪ್ಪನನ್ನು ಕುರಿತು ಬಂದಿರುವ ಕೆಲವು ಕೃತಿಗಳ ಹೆಸರನ್ನು ಕೊಟ್ಟು ಅಭ್ಯಾಸ ಮಾಡಲು ಸೂಚಿಸುತ್ತಾರೆ. ಕೇವಲ ಪುಸ್ತಕಗಳನ್ನು ಓದುವುದು ಅಷ್ಟೇ ಅಲ್ಲ ಓದಲು ಬಾರದವರಿಗೆ ಗಮಕಿಗಳು ನಾರಾಣಪ್ಪನ ರಸಾದೇಶದ ರುಚಿಯನ್ನು ಅವಿದ್ಯಾವಂತರಿಗೆ ತಿಳಿಸಿಕೊಡಬೇಕೆಂದು ಲೇಖಕರು ಆಶಿಸುತ್ತಾರೆ. ಅದೂ ಅಲ್ಲದೆ 'ಕುಮಾರವ್ಯಾಸ ಭಾರತ' ಗಮಕ ಕಲೆಗೆ ಹೇಳಿ ಮಾಡಿಸಿದ ಕೃತಿಯಾಗಿದೆ. ಗಮಕಿಗಳು ವಿಮರ್ಶಕರಾಗಿ ವಿಮರ್ಶಕರು ಗಮಕಿಗಳಾಗಿ, ಒಬ್ಬರಿಗೊಬ್ಬರು ನೆರವಾಗಿ, ಎರಡೂ ಕಲೆಗಳ ಉಪಾಸಕರು ಅನ್ಯೋನ್ಯವಾಗಿ ಹೊರಟರೆ ಕುಮಾರ ವ್ಯಾಸ ಸೇವೆ ಜನಸಾಮಾನ್ಯರಿಗೆಲ್ಲ ಲಭಿಸುತ್ತದೆ. ನಮ್ಮ ನಾಡಿಗೆ ದೇವರು ದಯಪಾಲಿಸಿರುವ ಪಂಪ-ನಾರಣಪ್ಪರ, ಬೆಲೆಯರಿತು ನಾಡಿನ ಬಾಳು ಅರಳಲಿ, ಆ ವಿಶ್ವಕವಿಗಳಿಬ್ಬರನ್ನೂ ನಮ್ಮವರೆಂದು ಹೇಳಿಕೊಳ್ಳುವ ನಮ್ಮ ಹೆಮ್ಮೆಯ ನೆತ್ತಿ ಮುಗಿಲಿಗೆ ತಾಗಲಿ ಎಂದು ಆಶಿಸುತ್ತಾರೆ.

## ಮಲೆನಾಡಿನ ನಿಸರ್ಗವಿಭೂತಿ

''ಹೋಗುವೆನು ನಾ ಹೋಗುವೆನು ನಾ, ನನ್ನ ಒಲುಮೆಯ ಗೂಡಿಗೆ
ಮಲೆಯ ನಾಡಿಗೆ ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ
ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆ ಕಾಡಿನ
ಹಸುರು ಸೊಪಿನ ಬಿಸಿಲು ತಂಪಿನ ಗಾನದಿಂಪಿನ ಕೂಡಿಗೆ''[೫]

ಎಂಬ ಸುಂದರ ಪದ್ಯದಿಂದ ಮಲೆನಾಡಿನ ದರ್ಶನವನ್ನು ಮಾಡಿಸುತ್ತಾರೆ. ಆಧುನಿಕ ಕವಿ ಈ ರೀತಿ ಹಾಡಿದರೆ, ಸಾವಿರ ವರ್ಷಗಳ ಹಿಂದಿದ್ದ ಪಂಪನು ''ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್, ಆರಂಕುಶವಿಟ್ಟೊಡಂ ನೆನೆವುದೆನ್ನ ಮನಾ ವನವಾಸಿದೇಶಮಂ''.[೬]

೪. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೧೪
೫. ಅದೇ ಪುಟ ೨೮
೬. ಅದೇ ಪುಟ ೨೯

ಎಂದು ಹಾಡಿರುವುದನ್ನು ದಾಖಲಿಸುತ್ತ ಪಂಪನನ್ನು ಆದಿಯಾಗಿಟ್ಟುಕೊಂಡು ಕವಿಗಳನ್ನು ಮಲೆನಾಡು ಸೆಳೆಯುತ್ತದೆ ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ಲೇಖಕರು ಇನ್ನೊಂದು ವಿಷಯದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಅಂದಿನ ಸೊಬಗು, ಸೊಗಸು, ಸೌಂದರ್ಯಗಳಿಂದ ಕೂಡಿದ ಮಲೆನಾಡು ಈಗ ಹೇಗಿದೆ. ಇಂದಿನವರನ್ನು ಕೇಳಿದರೆ ತಪ್ಪುಮಾಡಿದ ಅಧಿಕಾರಿಗಳಿಗೆ ಶಿಕ್ಷೆ ಕೊಡುವ ಸಲುವಾಗಿ ಅವರನ್ನು ಮಲೆನಾಡಿಗೆ ವರ್ಗ ಮಾಡುತ್ತದೆ ಎಂಬ ಹೀನ ಪ್ರಕ್ರಿಯೆ ಜನಮನದಲ್ಲಿ ಇರುವುದನ್ನು ಲೇಖಕರು ಬೇಸರದಿಂದ ಉಲ್ಲೇಖಿಸುತ್ತಾರೆ. ಇಂದಿನವರೆಗೆ ಮಲೆನಾಡು ಎಂದರೆ ಮಳೆ, ಸೊಳ್ಳೆ, ಹುಲಿ, ಹಾವು, ರೋಗ, ಸಾವು, ಭೂಮಿಯಲ್ಲಿ ಹುಟ್ಟಿದ್ದಕ್ಕೆ ಹೇಗಾದರೂ ಮಾಡಿ ನಿವಾರಿಸಿಕೊಳ್ಳಬೇಕಾಗಿರುವ ಒಂದು ದುರ್ಗಮ ದುರಂತ ಭೂಭಾಗವಾಗಿದೆ. ಕವಿಯ ವರ್ಣನೆ ನಿಜವೋ, ಜನಗಣತಿಯ ವರದಿ ನಿಜಯೋ ಎಂದರೆ ''ಎರಡೂ! ಎಂಬುದೇ ಸದ್ಯಕ್ಕೆ ಸರಿಯಾದ ಉತ್ತರ!''[೭] ಎಂದು ಆಶ್ಚರ್ಯದಿಂದ ಉತ್ತರಿಸುತ್ತಾರೆ. ಅಂದರೆ ಜನಗಣತಿಯ ಮಾತನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲು ಅವರು ಸಿದ್ದರಿಲ್ಲ ಎಂದಾಗುತ್ತದೆ.

ಮಲೆನಾಡಿನ ಸೌಂದರ್ಯ ಸಾವಿರ ವರ್ಷದ ಹಿಂದೆ ಹೇಗಿತ್ತೋ ಹಾಗೆ ಇದೆ. ಅದರ ಸೌಭಾಗ್ಯಕ್ಕೆ ಮಾತ್ರ ಇಳಿಗಾಲ ಬಂದಿದೆ. ಮಲೆನಾಡಿನ ಸೌಂದರ್ಯವೆಂದರೆ ಗಗನಚುಂಬಿಯಾದ ಬೆಟ್ಟಗಳು, ದಟ್ಟವಾದ ಕಾಡು, ಎತ್ತರದ ತೋಟಗಳು, ತರತರದ ಹಕ್ಕಿಗಳು, ಸಾವಿರದ ತರದ ಅರಣ್ಯ ಜಂತುಗಳು, ಹೂವು,ಗಂಧ, ಮೌಲಿಕ, ಕಬ್ಬು, ಕಾಫಿ, ಏಲಕ್ಕಿ, ಮಾಂಸ, ಉಗುರು, ಕೊಬ್ಬು, ಗರಿ, ಚರ್ಮ, ಮೊಸಳೆ, ಮೀನು, ಹೀಗೆ ಏನುಂಟು ? ಎನಿಲ್ಲ ? ನಮ್ಮ ಮಲೆನಾಡಿನಲ್ಲಿ. ಹೀಗಿದ್ದು ಲೇಖಕರು ವ್ಯಾಕುಲರಾಗಿದ್ದಾರೆ. ಏಕೆಂದರೆ ಇಷ್ಟೊಂದು ಸಂಪತ್ತಿದ್ದರೂ ನಮ್ಮವರು ಎಚ್ಚೆತ್ತುಕೊಂಡಿಲ್ಲ ಎಂಬುದು ಅವರ ಪ್ರಕಾರ ಸಸ್ಯಶಾಸ್ತ್ರಜ್ಞರು, ಪ್ರಾಣಿಶಾಸ್ತ್ರಜ್ಞರೂ, ಖನಿಜಶಾಸ್ತ್ರಜ್ಞರೂ, ಪಾಶ್ಚಾತ್ಯ ಪುಸ್ತಕ ಶಾಸ್ತ್ರಜ್ಞಾನದಿಂದ ತೃಪ್ತಿ ಪಟ್ಟುಕೊಳ್ಳದೆ ಈ ಕಡೆಗೆ ತಿರುಗಿ ಕೆಲಸ ಮಾಡಿದರೆ ನಾವೆಲ್ಲ ಎಷ್ಟೋ ಶ್ರೀಮಂತರಾಗುತ್ತೇವೆ ಎಂದು ಸಲಹೆ ನೀಡುತ್ತಾರೆ.

## 'ಪರಮಹಂಸರ ವಚನಾಮೃತದಲ್ಲಿ ದೃಷ್ಟಾಂತ ಕಥಾವಿಧಾನ

ಪ್ರತಿಮಾ, ಪ್ರತೀಕ, ಸಂಕೇತ, ನಿದರ್ಶನ, ದೃಷ್ಟಾಂತ, ಸಾಮತಿ ಈ ಎಲ್ಲಾ ವಿಧಾನಗಳು ನಾಗರೀಕತೆಯ ಪ್ರಾರಂಭದಿಂದಲೂ ಜ್ಞಾನಸಾಧನೆಗಾಗಿ, ಮಾನವನ ಬುದ್ಧಿಯನ್ನು, ಭಾವವನ್ನು ಬೆಳೆಸುತ್ತಾ ಆತ್ಮಶಕ್ತಿಯನ್ನು ಬೆಳಗಿಸಲು ಬೇಕಾಗಿವೆ. ಭಗವಾನ್ ಶ್ರಿ ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಯನ್ನು ಓದಿದಾಗ ಅವರ ಸಾಧನೆ ಮತ್ತು ಸಿದ್ದಿಗಳ ಭೂಮಿಯಲ್ಲಿ ಪ್ರತಿಮಾವಿಧಾನವು ಹೆಜ್ಜೆಹೆಜ್ಜೆಗೂ ಮಿಂಚಿ ಮೂಡುವುದನ್ನು ಲೇಖಕರು ಗುರುತಿಸುತ್ತಾರೆ. ಅದಕ್ಕಾಗಿ ಪರಮಹಂಸರು ಜೀವನ ಚರಿತ್ರೆಯ ಒಂದು ಪ್ರಸಂಗವನ್ನು ಕೊಟ್ಟು, ಆ ಪ್ರಸಂಗದಲ್ಲಿ ಪಾಪಪುಣ್ಯಗಳ ಸ್ವರೂಪ, ಪಾಪವನ್ನು ನಿರಸನಗೊಳಿಸುವ ಪುಣ್ಯದ ಲಕ್ಷಣ, ಪಾಪಪುಣ್ಯಗಳ

೭. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೩೨

ಹೋರಾಟ, ಕೊನೆಯದಾಗಿ ಪಾಪದ ವಿನಾಶ ಮತ್ತು ಪುಣ್ಯದ ಜಯ ಇವೆಲ್ಲವುಗಳು ಪರಮಹಂಸರಿಗಾದ ಪ್ರತಿಮಾ ವಿಧಾನದ ಅನುಭವ ಎಷ್ಟು. ಜೀವಂತವಾಗಿ ಮತ್ತು ನಾಟಕೀಯ ಬಂದಿದೆ ಎಂಬುದನ್ನು ಲೇಖಕರು ವಿವರಿಸುತ್ತಾರೆ. ಹಾಗೆಂದ ಮಾತ್ರಕ್ಕೆ ಪರಮಹಂಸದಲ್ಲಿ ಪ್ರತಿಮಾವಿಧಾನವನ್ನು ಮಾತ್ರ ಕಾಣುತ್ತೇವೆ ಎಂದಲ್ಲ. ಅವರ ಬದುಕಿನಲ್ಲಿ, ಅವರ ಸಾಧನೆ ಸಿದ್ಧಿ, ಉಪದೇಶಗಳಲ್ಲಿ ಪ್ರತಿಮಾ ವಿಧಾನ ವಿಶೇಷವಾದರೂ ಇತರೆ ವಿಧಾನಗಳೂ ತಲೆದೋರಿರುವುದನ್ನು ಲೇಖಕರು ಗುರುತಿಸುತ್ತಾರೆ.

ಮುಂದೆ ಲೇಖಕರು ಪ್ರತಿಮೆಯನ್ನು ಬಿಟ್ಟು ಇನ್ನುಳಿದ ದೃಷ್ಠಾಂತ ಮತ್ತು ಸಾಮತಿಯನ್ನು ಹೇಳಲು ತೊಡಗುತ್ತಾರೆ. ದೃಷ್ಟಾಂತ ಕಥೆ ಎಂದರೆ ಸಾಮತಿಯೇ ಆಗಿದೆ. ಸಾಮತಿ ಯಾವಾಗಲೂ ಕಥಾ ರೂಪದಲ್ಲಿಯೇ ಇರುತ್ತದೆ, ಎಂದು ಹೇಳಿ ಆದಕ್ಕೆ ಸಂಗತವಾಗುವ ಮೂರು ನಿದರ್ಶನಗಳನ್ನು ಕೊಡುತ್ತಾರೆ. ಶಾಸ್ತ್ರಜ್ಞಾನದ ತಪ್ಪುತಿಳುವಳಿಕೆಯಿಂದ ಆಗುವ ಪ್ರಮಾದವನ್ನು ಹೇಗೆ ಸೂಚಿಸುತ್ತದೆ ಮತ್ತು ಹೇಗೆ ತಿದ್ದುತ್ತದೆ ಎಂಬುದನ್ನು 'ಮಾವಟಿಗಬ್ರಹ್ಮ' ಕಥೆಯನ್ನು, ಆಚರಣೆಯ ದೃಷ್ಠಿಯಿಂದ ಹಿಂಸೆ, ಅಹಿಂಸೆಗಳ ತತ್ವಸೂಕ್ಷ್ಮವನ್ನು ಬೋಧಿಸುತ್ತದೆ ಎಂಬುದನ್ನು 'ಸನ್ಯಾಸಿ ಮತ್ತು ಸರ್ಪದೀಕ್ಷೆ' ಕಥೆಯನ್ನು, ಮತ್ತು ಸತ್ತ್ವ, ರಜಸ್ಸು, ತಮಸ್ಸುಗಳ ಸ್ವರೂಪವನ್ನು ಯಾವ ವ್ಯಾಖ್ಯಾನವೂ ವಿವರಿಸಲಾರದಷ್ಟು ಸರ್ವಸುಲಭಗ್ರಾಹ್ಯವಾಗುವ ರೀತಿಯಲ್ಲಿ ವಿವರಿಸುವ 'ಮೂವರು ಕಳ್ಳರು ಮತ್ತು ಶ್ರಿಮಂತ' ಎಂಬ ಕಥೆಯನ್ನು ವಿವರಿಸುವುದರ ಮೂಲಕ ಪರಮಹಂಸರಲ್ಲಿ ಸಾಮತಿ, ದೃಷ್ಟಾಂತ ವಿಧಾನಗಳು ಹೇಗೆ ಬಂದಿವೆ ಎಂಬುದನ್ನು ವಿವರಿಸುವ ಪ್ರಯತ್ನವನ್ನು ಲೇಖಕರು ಮಾಡುತ್ತಾರೆ.

ಕೊನೆಯದಾಗಿ ಮೇಲಿನ ಮೂರು ಕಥೆಗಳೆಲ್ಲ ''ಹೋಮಾಪಕ್ಷಿ, ಉಪ್ಪಿನ ಬೊಂಬೆ, ಗೋಸುಂಬೆ, ನವಿಲು, ಅಫೀಮಿನ ರುಚಿ, ಆನೆ-ಕುರುಡರು, ಹುಲಿ- ಮೂವರು ಮಿತ್ರರು, ಹುಲ್ಲುಮೇಯುವ ಹುಲಿ, ಅಕ್ಷರ-ಫಕೀರ, ರಾಮಚಂದ್ರ- ಕಪ್ಪೆ, ಸಾಧುವೇಷದ ಬೆಸ್ತ, ಕಾರ್ತಿಕ ಗಣೇಶ''[8] ಹೀಗೆ ಒಂದಿಲ್ಲ ಎರಡಲ್ಲ ಹಲವಾರು ದೃಷ್ಟಾಂತಗಳಿಂದ ಪರಮಹಂಸರ ವಚನಾಮೃತವು ಮನೋಜ್ಞವಾಗಿವೆ ಎಂದು ಹೇಳುತ್ತಾ ಲೇಖನವನ್ನು ಮುಗಿಸುತ್ತಾರೆ.

## ದಿವಂಗತ ರಾಷ್ಟ್ರಪಿತ !

ಗಾಂಧೀಜಿಯವರ ನಿಧನದ ಮರುದಿನ ಸಂಜೆ ಮೈಸೂರು ಆಕಾಶವಾಣಿಯಲ್ಲಿ ಕುವೆಂಪು ಅವರು ಮಾಡಿದ ಭಾಷಣದ ಸಾರ ಈ ಲೇಖನದಲ್ಲಿದೆ. ಗಾಂಧೀಜಿಯ ಮರಣವನ್ನು ನಮ್ಮ ರಾಷ್ಟ್ರ ಪಿತಾಮಹ ರಣರಂಗದ ಮಧ್ಯೆ ಶರಶಯ್ಯೆಯಲ್ಲಿ ಅಸ್ತಂಗತನಾದನು ಎಂದು ಅತ್ಯಂತ ವ್ಯಾಕುಲದಿಂದ ನುಡಿಯುತ್ತಾರೆ. ಸಾಕ್ರಿಟೀಸನನ್ನು

---

೮. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೬೪

ವಿಷ ಉಣಿಸಿ ಕೊಂದರೆ, ಕ್ರಿಸ್ತನನ್ನು ಶಿಲುಬೆಗೇರಿಸಿ ಕೊಂದರೆ, ನಮ್ಮ ರಾಷ್ಟ್ರಪಿತನನ್ನು ಪ್ರಾರ್ಥನಾ ಸಭೆಯ ವೇದಿಕೆಯ ಮೇಲೆ ಕೊಲೆಗಾರನೊಬ್ಬ ತನ್ನ ಕ್ರೂರ ಹಸ್ತದಿಂದ ಗುಂಡಿಕ್ಕಿ ಕೊಂದುಬಿಟ್ಟನಲ್ಲ ಎಂದು ದುಃಖಿಸುತ್ತಾರೆ. ಲೇಖಕರ ಪ್ರಕಾರ ಗಾಂಧೀಜಿಯ ಹತ್ಯೆ ನಮ್ಮ ದೇಶಕ್ಕೆ, ದೇಶವೇ ಜಗತ್ತಿನ ಮುಂದೆ ಮಹಾಪರಾಧಿಯಾಗಿ, ಅವಮಾನಿತವಾಗಿ ಮಾಡಿದೆ.

ಯೇಸುವನ್ನು ಶಿಲುಬೆಗೇರಿಸಿದಾಗ ಅವನು 'ಕ್ಷಮಿಸು ತಂದೆ' ಎಂದು ಭಗವಂತನನ್ನು ಬೇಡಿದನಂತೆ. ಆದರೆ ನಿನ್ನೆ ಮಡಿದ ನಮ್ಮ ಕ್ರಿಸ್ತನಿಗೆ ಅಷ್ಟಕ್ಕೂ ಅವಕಾಶವಿರಲಿಲ್ಲ. ಅವರ ಮುಖಮುದ್ರೆ ಮಾತ್ರ 'ಕ್ಷಮಿಸು ತಂದೆ' ಎನ್ನುತ್ತಿತ್ತಂತೆ ಎಂದು ಗಾಂಧೀಜಿಯವರನ್ನು ಲೇಖಕರು ಯೇಸು ಕ್ರಿಸ್ತಗೆ ಹೋಲಿಸುತ್ತಾರೆ.

ಲೇಖಕರ ಪ್ರಕಾರ ''ಗಾಂಧೀಜಿಯವರು ಮೃತರಾದರು ಎಂಬುದು ಲೋಕೋಪಚಾರದ ಮಾತು. ನಿಜವಾದ ನಿಜವಲ್ಲ, ಏಕ ದೇಹಸ್ಥವಾಗಿದ್ದ ಚೇತನ ಈಗ ಸರ್ವತ್ರವಾಗಿದೆ. ಆ ಶಕ್ತಿಗೆ ಅಂತ್ಯವಿಲ್ಲ. ಕಾಲ ಕಳೆದಂತೆಲ್ಲ ಅದು ಬಹುಗುಣಾತಗುತ್ತ ಹೋಗುತ್ತದೆ''[೯] ಗಾಂಧೀಜಿಯನ್ನು ಹೆತ್ತ ನಮ್ಮ ಭೂಮಿತಾಯಿ ಎಂದೆಂದಿಗೂ ಅನಾಥೆಯಲ್ಲ. ನಿತ್ಯವೂ ಸನಾಥೆಯೆನ್ನುವ ಲೇಖಕರು ಈ ಪೂಜ್ಯ ಮಹಾತ್ಮನು ನಮ್ಮನ್ನು ಕ್ಷಮಿಸಲಿ, ನಮ್ಮನ್ನು ಕೈಬಿಡದೆ ಕಾಯಲಿ ಎಂದು ಬೇಡಿಕೊಳ್ಳುತ್ತಾರೆ. ಕೊನೆಯಲ್ಲಿ ಮಡಿದ ಆ ಧೀಮಂತ ನಾಯಕನಿಗೆ

ಮಹಾತ್ಮಾ ಗಾಂಧೀಕಿ ಜಯ್
ಜಯ್ ಹಿಂದ್ ಎಂದು ಜಯಕಾರ ಹಾಕುತ್ತಾರೆ.

## ಕಾವ್ಯವಿಹಾರ

### ಲಕ್ಷ್ಮೀಶನ ಸೀತಾವನವಾಸ

ಕುವೆಂಪು ತಮ್ಮ 'ಕಾವ್ಯವಿಹಾರ' ಕೃತಿಯಲ್ಲಿ ಲಕ್ಷ್ಮೀಶ ಕವಿಯ ಬರೆದ 'ಜೈಮಿನಿ ಭಾರತ'ದ ಸೀತಾವನವಾಸದ ಪ್ರಸಂಗವನ್ನು ವಿಮರ್ಶೆಗೆ ಒಳಪಡಿಸುತ್ತಾರೆ. ಪಂಪ, ರನ್ನ, ಕುಮಾರವ್ಯಾಸರ ಭಾರತವು ಕುರುಕ್ಷೇತ್ರ ಯುದ್ಧದಲ್ಲಿ ಅಂತ್ಯ ಕಂಡರೆ, ಲಕ್ಷ್ಮೀಶನ ಭಾರತವು ಕುರುಕ್ಷೇತ್ರ ನಂತರದ ಕಥೆಯನ್ನು ಒಳಗೊಂಡಿದೆ. ಅಂದರೆ ಕುರುಕ್ಷೇತ್ರ ಯುದ್ಧದಲ್ಲಿ ತನ್ನವರನ್ನು ಬಲೆಕೊಟ್ಟ ಪ್ರಾಯಶ್ಚಿತಕ್ಕಾಗಿ ಧರ್ಮರಾಯ ಅಶ್ವಮೇಧಯಾಗವನ್ನು ಪ್ರಾರಂಭಿಸುತ್ತಾನೆ. ಈ ಅಶ್ವಮೇಧಯಾಗದ ಕಥೆಯೇ 'ಜೈಮಿನಿ ಭಾರತ'ದ ಕಥಾವಸ್ತು. ಲಕ್ಷ್ಮೀಶನು ಅಶ್ವಮೇಧ ಪರ್ವವನ್ನು ತನ್ನ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡಿರುವುದರ

೯. ಕುವೆಂಪು : ವಿಭೂತಿ ಪೂಜೆ: ಉದಯರವಿ ಪ್ರಕಾಶನ :೧೯೯೬ : ಪುಟ ೬೭

ಬಗೆಗೆ ಕುವೆಂಪು ಸಂದೇಹ ವ್ಯಕ್ತಪಡಿಸುತ್ತಾರೆ. ಅದೇನೆಂದರೆ ಅಶ್ವಮೇಧಗಳೆಂದರೆ ಕಾಳಗಗಳ ಪರಂಪರೆ. ಇಲ್ಲಿ ಬರಿ ಯುದ್ಧವರ್ಣನೆ, ಅಸ್ತ್ರಪ್ರತ್ಯಸ್ತ್ರಗಳ ಪ್ರಯೋಗ, ಸತ್ತವರ ಗೋಳಾಟ, ನೆತ್ತರು, ಮಾಂಸ, ಮೊದಲಾದವುಗಳ ಬಣ್ಣನೆಗಳಲ್ಲಿ ಕವಿಯ ಪ್ರತಿಭೆ ಮುಗಿಯುವುದಿಲ್ಲವೆ? ಎಂಬುದು. ಅದಕ್ಕೆ ಉತ್ತರವನ್ನು ಕುವೆಂಪು ಕಂಡುಕೊಂಡಿದ್ದಾರೆ. ಅದೇನೆಂದರೆ ಯುದ್ಧ ಸಾಮಗ್ರಿಯನ್ನು ಸ್ವೀಕರಿಸಿದರೆ ತನ್ನ ಪ್ರತಿಭಾಶಕ್ತಿಯ ಅವಿಷ್ಕಾರಕ್ಕೆ ಅವಕಾಶ ಇರುವುದಿಲ್ಲ ಎಂಬುದನ್ನು ಅರಿತು ಕವಿ ಲಕ್ಷ್ಮೀಶ ತನ್ನ ಕಾವ್ಯ ಮುಖ್ಯವಾಹಿನಿಗೆ ಉಪಕಥೆಗಳನ್ನು ಸೇರಿಸಿ, ಕಥೆ ನೀರಸವಾಗದಂತೆ ಮಾಡಿದ್ದಾನೆ. ''ಅಶ್ವಮೇಧಯಾಗದಂತಹ ಕಾವ್ಯವಸ್ತುವನ್ನು ಸಾಧಾರಣ ಕವಿ ಬರೆದಿದ್ದ ಪಕ್ಷದಲ್ಲಿ ಬರಿಯ ಯುದ್ಧ ವರ್ಣನೆಗಳನ್ನು ತುಂಬಿ ಕಾವ್ಯವನ್ನು ಅಂದಗೆಡಿಸಿ ಓದುಗರಿಗೆ ಬೇಸರ ಜಿಗುಪ್ಸೆ, ಆಯಾಸ ಇವುಗಳನ್ನು ಉಂಟುಮಾಡದೆ ಇರುತ್ತಿರಲಿಲ್ಲ''[೧] ಆದರೆ ಲಕ್ಷ್ಮೀಶನಂತಹ ಮಹಾಕವಿ ಅದನ್ನು ಸಾರವತ್ತಾಗಿ ಚಿತ್ರಿಸಿದ್ದಾನೆ. ಹಾಗೆಂದ ಮಾತ್ರಕ್ಕೆ ಸಂಪ್ರದಾಯಗಳು ಲಕ್ಷ್ಮೀಶನನ್ನು ಬಂಧಿಸಲಿಲ್ಲ ಎಂದಲ್ಲ. ಸಮರ್ಥವಾದ ಕವಿ ಆ ಸಂಕೋಲೆಗಳನ್ನು ತನ್ನ ಪ್ರತಿಭೆಯಿಂದ ಆಭರಣಗಳನ್ನಾಗಿ ಮಾಡಿಕೊಂಡಿದ್ದಾನೆ. ಜೊತೆಗೆ ಒಳ್ಳೆಯದಾಗಲಿ, ಕೆಟ್ಟದಾಗಲಿ ಲಕ್ಷ್ಮೀಶನಲ್ಲಿ ಯಾವುದೂ ಅತಿಯಾಗಿಲ್ಲ. ಎಲ್ಲವೂ ಮಿತವಾಗಿವೆ. ಈ ಮಿತತ್ವವೆ ಆತನ ಮಹತ್ತಿಗೆ ಮುಖ್ಯಕಾರಣ ಎಂದು ಕುವೆಂಪು ಹೇಳುತ್ತಾರೆ.

ಲಕ್ಷ್ಮೀಶ ಕಾವ್ಯಮಹಾರ್ಣವಕ್ಕೆ ಪವಿತ್ರವಾದ ಗಂಗೆಯೆಂದರೆ 'ಸೀತಾವನವಾಸ' ಪ್ರಸಂಗವೆಂದು ಕುವೆಂಪು ಗುರುತಿಸುತ್ತಾರೆ. ಅವರ ಈ ಪ್ರಸಂಗವನ್ನು ಕುರಿತು ಮಾತನಾಡುತ್ತಾ ಮಾನವ ಜೀವಮಾನದಲ್ಲಿ ಅನಿವಾರ್ಯವಾಗಿ ಎದುರಾಗುವ ಕೆಲವು ಸನ್ನಿವೇಶಗಳು ಕಂಡು ಬರುತ್ತವೆ. ಅಂದರೆ ''ಸ್ವಾಭಿಮಾನದಿಂದ ಹಿಡಿದು ನಿರಾಕರಣೆಯ ಕ್ರೌರ್ಯ, ಕಿಂಕರನ ಕಷ್ಟ, ಪ್ರೇಮದ ಪ್ರಲಾಪ, ಧರ್ಮದ ಸಹಾಯ, ಮಾತೆಯ ಪುತ್ರವಾತ್ಸಲ್ಯ, ಪುತ್ರರ ಮಾತಾಭಕ್ತಿ, ಸ್ವಾಭಾಮಿಕವಾದ ಕ್ಷತ್ರಿಯ ಬಾಲಕರ ಶಕ್ತಿ, ಅದೃಷ್ಟಲೀಲೆ, ಅನ್ಯಾಯಕ್ಕೆ ತಕ್ಕ ಪ್ರತಿಫಲ, ಪ್ರಾಯಶ್ಚಿತ್ತ, ಪ್ರಶ್ಚಾತ್ತಾಪ, ಸ್ವೀಕಾರ, ಇವುಗಳೆಲ್ಲವನ್ನೂ ಸಂದರ್ಶಿಸುತ್ತೇವೆ.'''[೨] ಹೀಗೆ ಹೇಳುವ ಕುವೆಂಪು ಕವಿವರ್ಯನಿಗೆ ಆಧುನಿಕವಾದ ಪ್ರತಿಭೆಯ ಪ್ರಚೋದನೆ ಇದ್ದಿದ್ದರೇ ಈ ಒಂದು ಪ್ರಸಂಗವನ್ನ ಸಣ್ಣ ಕಾವ್ಯವನ್ನಾಗಿ ಬರೆದು ಕನ್ನಡ ನುಡಿವೆಣ್ಣಿನ ಚೂಡಾಮಣಿಯನ್ನಾಗಿ ಮಾಡಬಹುದಿತ್ತು ಎಂಬ ಮುನ್ನೋಟವನ್ನು ಕೊಡುತ್ತಾರೆ.

ಕುವೆಂಪು ಲೇಖನದ ಎರಡನೇ ಭಾಗದಲ್ಲಿ ಕಥೆಯ ಸಾರವನ್ನು ಕೊಡುತ್ತಾರೆ. ಅಂದರೆ ಗಂಗಾ ನದಿಯ ವರ್ಣನೆ, ಸೀತೆ ಮತ್ತು ಸೌಮಿತ್ರಿಯರ ಸಂಭಾಷಣೆ, ಸೀತೆಯನ್ನು ನೋಡಿಕೊಳ್ಳುವಂತೆ ಪ್ರಕೃತಿಗೆ ಮೊರೆಯಿಟ್ಟು ಸೌಮಿತ್ರಿ, ಋಷಿತಿಲಕನಾದ ವಾಲ್ಮೀಖಿಯ ಆಶ್ರಮ ಸೇರಿದ ಸೀತೆ, ಲವಕುಶರಿಗೆ ಜನ್ಮ ನೀಡಿದ

೧. ಕುವೆಂಪು : ಕಾವ್ಯವಿಹಾರ: ಉದಯರವಿ ಪ್ರಕಾಶನ :೧೯೯೭ : ಪುಟ :೨

೨. ಅದೇ ಪುಟ ೨

ಸನ್ನಿವೇಶಗಳನ್ನು ವರ್ಣಿಸುತ್ತಾರೆ. ಮೂರನೆಯ ಭಾಗದಲ್ಲಿ ಲವಕುಶರು ರಾಮನ ಅಶ್ವಮೇಧಯಾಗದ ಕುದುರೆಯನ್ನು ಕಟ್ಟಿ, ತಂದೆಯೊಂದಿಗೆ ಯುದ್ಧ ಮಾಡಿದ ಕೆಲವು ಪಂಕ್ತಿಗಳನ್ನು ವಿವರಿಸುತ್ತಾರೆ.

ಲೇಖನದ ಕೊನೆಯಲ್ಲಿ 'ಸೀತಾವನವಾಸ'ದಲ್ಲಿ ಕೆಲವು ಕುಂದುಕೊರತೆಗಳನ್ನು ಕುವೆಂಪು ಗುರುತಿಸುತ್ತಾರೆ. ಅವರ ಪ್ರಕಾರ ರಾಮನಿಗೆ ಲವಕುಶರು ತನ್ನ ಮಕ್ಕಳೆಂದು ತಿಳಿಯುವ ಸನ್ನಿವೇಶಗಳನ್ನು ಇನ್ನೂ ಆಶ್ಚರ್ಯಕರವಾಗಿ, ರಸಭರಿತವಾಗಿ ಮಾಡಬಹುದಾಗಿತ್ತು. ಅಲ್ಲದೆ ತನ್ನ ಮಕ್ಕಳೆಂದು ತಿಳಿದ ಮೇಲೆ ತಂದೆಗಾಬಹುದಾದ ಆಶ್ಚರ್ಯ ಸಂತೋಷಗಳು ಚೆನ್ನಾಗಿ ಹೊರಪಟ್ಟಿಲ್ಲ. ಹಾಗೆಯೇ ಸೀತಾವನವಾಸದಲ್ಲಿ ಮೊದಮೊದಲು ಕಂಡುಬಂದ ಕವಿಯ ಪ್ರತಿಭಾಜ್ಯೋತಿ ಕೊನೆಯಲ್ಲಿ ಕಂಡುಬರುವುದಿಲ್ಲ ಎಂದು ತೀರ್ಮಾನಿಸುತ್ತಾರೆ.

## ಕುಮಾರವ್ಯಾಸನ ದುರಂತ ಕರ್ಣ

ಕುಮಾರವ್ಯಾಸ ಭಕ್ತಕವಿ. ಆತನ ಆರಾಧ್ಯ ದೈವ ಶ್ರೀಕೃಷ್ಣ, ಅವನೊಬ್ಬ ಅವತಾರಪುರುಷ, ನಾರಣಪ್ಪನಿಗೆ ಭಕ್ತಿಯೇ ಪ್ರಧಾನರಸ, ಧರ್ಮ ಮುಖ್ಯವಾಗಿರುವ ಇವನಿಗೆ ಕಲೆ, ಲಲಿತಕಲೆ ಗೌಣವಾಗಿವೆ. ಇವು ತನ್ನ ಧರ್ಮಭೋಧನೆಗೆ ಸಹಾಯಕವಾಗಿ ಬಳಸುತ್ತಾರೆ. ತನ್ನ ಕಾವ್ಯದ ನಾಯಕ ಶ್ರೀಕೃಷ್ಣನಾಗಿರುವಾಗ, ಅವನನ್ನು ಕೃಷ್ಣನನ್ನು ಬಣ್ಣಿಸುವುದೇ ಕೆಲಸ. ಆತನ ಮಹಿಮೆಯನ್ನು ಬಾಯಿ ತುಂಬ ಹೊಗಳುವ ಅವನಿಗೆ ಬೇರೆ ಯಾವ ಕಡೆಗೂ ಅಷ್ಟು ಗಮನವಿಲ್ಲ. ಹೀಗಿರುವಾಗ ತನ್ನ ದೈವ ಯಾವ ಪಕ್ಷ ವಹಿಸಿದ್ದನೋ, ಯಾರ ಶ್ರೇಯಸ್ಸಿಗಾಗಿ ಆತ ಯುದ್ಧ ಮಾಡುವನೋ ಅಂಥ ಪಾಂಡವರೇ ಕುಮಾರವ್ಯಾಸನ ದೃಷ್ಠಿಯಲ್ಲಿ ಗೌಣವಾಗಿದ್ದಾರೆ. ಅಂದ ಮೇಲೆ ಭಗವಂತನ ಪ್ರತಿಪಕ್ಷದವನಾದ ಕರ್ಣನಿಗೆ ಕವಿ ಎಷ್ಟೋ ತಾನೇ ಪ್ರಾಧಾನ್ಯ ನೀಡುತ್ತಾನೆ? ಎಂದು ಕುವೆಂಪು ಪ್ರಶ್ನಿಸುತ್ತಾರೆ. ಕರ್ಣ ಮಹಾನುಭಾವನಾದರೂ, ಅವನನ್ನು ಎಷ್ಟರಮಟ್ಟಿಗೆ ಎತ್ತಬೇಕೋ ಅಷ್ಟರಮಟ್ಟಿಗೆ ಮಾತ್ರ ಮೇಲೇರಿಸಿದ್ದಾನೆ. ಆದರೂ ಕವಿಯು ಕರ್ಣನಿಗೆ ಶ್ರೇಷ್ಠತರವಾದ ಆದರಣೆಗೆ ನೀಡಿದ್ದಾನೆ. ಕೆಲವುಕಡೆ ಕರ್ಣನನ್ನು ಅಪ್ರತಿಮವೀರನನ್ನಾಗಿ ಚಿತ್ರಿಸಿದ್ದಾನೆ. ಧರ್ಮ ನಿರೂಪಣೆಯನ್ನು ಆರೋಪಿಸಿಕೊಂಡಿರುವ ಕವಿ ಕೆಲವು ಸನ್ನಿವೇಶಗಳಲ್ಲಿ ತನ್ನ ಕಬ್ಬಿತನವನ್ನು ಮೆರೆಯುತ್ತಾನೆ.

ಇಡೀ ಮಹಾಭಾರತದಲ್ಲಿ ಕರ್ಣನದು ದುರಂತ ವ್ಯಕ್ತಿತ್ವ ಹುಟ್ಟಿನಿಂದ ಅನ್ಯಾಯಕ್ಕೆ ಒಳಗಾದ, ಅಕಾಲಮೃತ್ಯುವಿಗೆ ತುತ್ತಾದ ಜೀವವಾದ ಕರ್ಣನನ್ನು ಕುಮಾರವ್ಯಾಸನೂ ಸಹ ದುರಂತವ್ಯಕ್ತಿಯಾಗಿ ಚಿತ್ರಿಸಿದ್ದಾನೆ. ಪ್ರಾಚ್ಯರ ಪ್ರಕಾರ ದುರಂತ ವ್ಯಕ್ತಿ ಎಂದರೆ ಮೊದಲು ಉನ್ನತ ಸ್ಥಿತಿಯಲ್ಲಿದ್ದು, ಸುಗುಣನಾಗಿದ್ದು ಯಾವುದಾದರೊಂದು ಅಲ್ಪದೋಷದಿಂದ ಅಥವಾ ಮಾನಸಿಕ ದುರ್ಬಲತೆಯಿಂದ ಅಥವಾ ಯಾವುದಾದರೊಂದು ಗುಣದ ಅತ್ಯಾಧಿಕ್ಯದಿಂದ ದೋಷಿಯಾಗಿ ಕಷ್ಟ ಪರಂಪರೆಗಳಲ್ಲಿ ಸಿಕ್ಕಿ ಅಧೋಗತಿಗಿಳಿದು

ಮರಣ ಹೊಂದುವುದು. ಈ ದೃಷ್ಠಿಯಿಂದ ನೋಡಿದಾಗ ಕರ್ಣ ಮೊದಲು ಉನ್ನತ ಸ್ಥಿತಿಯಲ್ಲಿದ್ದು ಅನಂತರ ಅಧೋಗತಿಗೆ ಇಳಿದವನಲ್ಲ. ಆತನದಲ್ಲಿ ದುರಾಸೆಯೂ ಇಲ್ಲ, ಅನಿಶ್ಚಿಯವೂ ಇಲ್ಲ. ಆತನ ಆತ್ಮಹತ್ಯೆ ಮಾಡಿಕೊಂಡವನಲ್ಲ. ಹೀಗಾಗಿ ಕುವೆಂಪು ಪ್ರಕಾರ ಕರ್ಣ ದುರಂತ ವ್ಯಕ್ತಿಯಲ್ಲ.

ಕುವೆಂಪು ಪ್ರಕಾರ '' ಕರ್ಣನ ದುರಂತತೆಯಿರುವುದು ಆತನ ಜೀವನದಲ್ಲಿಯೂ ಅಲ್ಲ ಆತನ ಮರಣದಲ್ಲಿಯೂ ಅಲ್ಲ. ಆತನ ಜನನ, ಜೀವನ ಮರಣಗಳನ್ನು ಕಣ್ಣಾರೆ ಕಾಣತಕ್ಕ ನಮಗೆ ಉಂಟಾಗುವ ಮರ್ಮ ಭೇದಿಯಾದ ಮನೋವ್ಯಥೆಯಲ್ಲಿ''[೩] ಕರ್ಣನ ದುರಂತತೆಗೆ ಯಾವ ದೋಷ ಕಾರಣ? ಯಾರ ಕರ್ಮ ಕಾರಣ? ಯಾರ ಶಾಪ ಕಾರಣ ? ಪರುಶರಾಮನ ಶಾಪದಿಂದ ಆತನಿಗೆ ಹಾಗಾಯಿತೆ ? ಇಂದ್ರನಿಗೆ ವಜ್ರಕವಚವನ್ನು ಭಿಕ್ಷೆಯಿತ್ತದ್ದು ತಪ್ಪು ? ಹೀಗೆ ಅನೇಕ ಪ್ರಶ್ನೆಗಳನ್ನು ಹಾಕುವ ಕುವೆಂಪು ಆತನ ಬಾಳಿನ ಹಾದಿಯನ್ನು ಬೇರೆಯೆಡೆಗೆ ತಿರುಗಿಸಿದ ಕಾರಣ ಬೇರೊಂದಿದೆ ಎನ್ನುತ್ತಾರೆ. ಅದಾವುದೆಂದರೆ ಕನ್ಯೆಯಾಗಿದ್ದ ಕುಂತಿ ಮಗನನ್ನು ಪಡೆದಿದ್ದು ಮೊದಲ ತಪ್ಪು. ತಾಯಿ ಮಾಡಿದ ತಪ್ಪಿಗೆ ಮಗನು ತನ್ನ ಬಾಳನ್ನು ಬೀಳಿದನು. ಕರ್ಣನ ದುರಂತತೆಗೆ ಪ್ರಬಲವಾದ ಪ್ರಥಮ ಕಾರಣವನ್ನು ಹುಡುಕಬೇಕಾದರೆ ನಾವು ಕುಂತಿದೇವಿಯ ಮೊದಲನೆಯ ತಪ್ಪಿಗೆ ಕಡೆಗೆ ಹೋಗಬೇಕು ಎಂದು ಕುವೆಂಪು ಅಭಿಪ್ರಾಯ ಪಡುತ್ತಾರೆ.

## ಹರಿಶ್ಚಂದ್ರ ಕಾವ್ಯ

''ವಿಮರ್ಶೆ ಎಂದರೆ ಕವಿಪ್ರತಿಭೆಯಿಂದ ಹೊರ ಹೊಮ್ಮುವ ಸುಂದರ ಭಾವಮಯ ಕಾವ್ಯ ಕ್ಷೇತ್ರಗಳಲ್ಲಿ ಸೂಕ್ಷ್ಮಮತಿಯಾದ ಸಹೃದಯನೂ ಕೈಗೊಳ್ಳುವ ವಿಹಾರ ಯಾತ್ರೆ. ಅಥವಾ ಸಾಹಸಯಾತ್ರೆಯ ಕಥನಾ ಕಾರ್ಯ''[೪]. ಕಾರ್ಯ ಸಫಲವಾಗಬೇಕಾದರೆ ಅನುಭವ, ಸೂಕ್ಷ್ಮಮತಿ ಇರಬೇಕು. ಇದರೊಂದಿಗೆ ಶ್ರಮವಿಲ್ಲದೆ, ಉತ್ತಮವಾದುದು ಸಿಗುವುದಿಲ್ಲ. ವಿಮರ್ಶಕನು ಕವಿಗೆ ಶರಣಾಗುವಂತೆ ಓದುಗನು ವಿಮರ್ಶಕನೊಂದಿಗೆ ಸಹಾನುಭೂತಿಯಿಂದ, ಆತನ ಕಲ್ಪನೆಯೊಂದಿಗೆ ಸಾಗಬೇಕು. '' ಉತ್ತಮವಾದುದ್ದನ್ನು ಬೆರಳಿಟ್ಟು ತೋರುವುದು ಹೇಗೆ ವಿಮರ್ಶೆಯೋ, ಹಾಗೆಯೋ ಅನುತ್ತಮವಾದುದನ್ನು ಮುಚ್ಚುವುದು ಒಂದು ತೆರವಾದ ವಿಮರ್ಶೆಯೇ''[೫]. ಎಂದು ಹೇಳು ಕುವೆಂಪು ರಸ ಮತ್ತು ಆರಸ ಮಿಶ್ರವಾಗಿದ್ದಾಗ, ಅದನ್ನು ಯುಕ್ತವಾಗಿ ಸಂಗ್ರಹ ಮಾಡುವ ಕಾರ್ಯ ವಿಮರ್ಶೆಯದಾಗಿರುತ್ತದೆಂದು ಅಭಿಪ್ರಾಯಪಡುತ್ತಾರೆ. ಈ ಹೇಳಿಕೆಯ ಹಿನ್ನಲೆಯಲ್ಲಿ ನೋಡಿದಾಗ 'ಹರಿಶ್ಚಂದ್ರ ಕಾವ್ಯ'ದ ಪ್ರಥಮ ವಿಮರ್ಶೆಯೆಂದು, ಹರಿಶ್ಚಂದ್ರ ಕಾವ್ಯಸಂಗ್ರಹ ಎಂದು ಗುರುತಿಸಬಹುದೆನ್ನುತ್ತಾರೆ. ಈ ಗ್ರಂಥದ ಮುನ್ನುಡಿಯಲ್ಲಿ ಶ್ರೀಮಾನ್ ಬಿಎಂಶ್ರೀರವರು ಹೇಳಿರುವ ಮಾತುಗಳನ್ನು ತಮ್ಮ ಲೇಖನದಲ್ಲಿ ಉಲ್ಲೇಖಿಸುತ್ತಾರೆ. 7-8 ಶತಮಾನಗಳ

೩. ಕುವೆಂಪು : ಕಾವ್ಯವಿಹಾರ: ಉದಯರವಿ ಪ್ರಕಾಶನ :೧೯೯೭ : ಪುಟ :೨೪
೪. ಅದೇ ಪುಟ ೬೩
೫. ಅದೇ ಪುಟ ೬೩

ಹಿಂದಿದ್ದ ರಾಘವಾಂಕನು ರಚಿಸಿದ 'ಹರಿಶ್ಚಂದ್ರ ಕಾವ್ಯ' ಉತ್ತಮವಾಗಿದ್ದು ಅದನ್ನು ಎಲ್ಲರೂ ಓದುವಂತಾಗಿರಬೇಕು. ಪೂರ್ಣ ಗ್ರಂಥ ಓದದಿದ್ದರೂ ಉತ್ತಮ ಭಾಗಗಳನ್ನಾದರೂ ಓದಬೇಕು. ಅದಕ್ಕಾಗಿ ಹರಿಶ್ಚಂದ್ರ ಕಾವ್ಯ ಸಂಗ್ರಹವನ್ನು ಕಂಡಕಂಡವರಲ್ಲಿ ಓದಬೇಕು, ಇತರರನ್ನೂ ಓದಿ ಎನ್ನುವಂತಿರಬೇಕು. 'ಹೀಗೆ ಹರಿಶ್ಚಂದ್ರ ಕಾವ್ಯ ಸಂಗ್ರಹದ' ವಾಚನ ರಸಿಕರಿಗೊಂಡು ರಸಯಾತ್ರೆಯಾಗುತ್ತದೆಂದು ಬಿಎಂಶ್ರೀ ಹೇಳಿರುವ ಮಾತುಗಳ ಸಂಗ್ರಹವಾಗಿದೆ.

'ಹರಿಶ್ಚಂದ್ರ ಕಾವ್ಯ'ದ ಮೊದಲ ದೃಶ್ಯ ಇಂದ್ರನ ಒಡ್ಡೋಲಗದಲ್ಲಿ. ವಶಿಷ್ಟ ಮತ್ತು ವಿಶ್ವಾಮಿತ್ರರ ನಡುವಿನ ವಾಗ್ವಾದ, ವಿಶ್ವಾಮಿತ್ರನ ಶಪಥದೊಂದಿಗೆ ಈ ದೃಶ್ಯ ಮುಗಿಯುತ್ತದೆ. ರಾಘವಾಂಕರ ಪದಗಳು, ಪದಗುಂಪುಗಳು, ಮೂರ್ತಿಭಾವಗಳು, ಭಾವ ಮೂರ್ತಿಗಳೆನ್ನುವ ಕುವೆಂಪು 'ಶೈಲಿ ಚಿಂತನೆಗಳ ಚರ್ಮ' ಎಂಬ ಮಾತಿಗೆ ರಾಘವಾಂಕನನು ಹಿರಿಯ ಸಾಕ್ಷಿ ಎಂದು ಗುರುತಿಸುತ್ತಾರೆ.

ಮುಂದೆ ವಿಶ್ವಾಮಿತ್ರನು ಹರಿಶ್ಚಂದ್ರ ರಾಜ್ಯವನ್ನು ಸೇರಿ, ರಾಜ್ಯ ಅಧಿಕಾರಗಳನ್ನು ಕಸಿದುಕೊಂಡು, ಹರಿಶ್ಚಂದ್ರನನ್ನು ಭಿಕಾರಿಯನ್ನಾಗಿ ಮಾಡಿ ಕಾಡಿಗಟ್ಟುವ ಪ್ರಸಂಗ, ನಕ್ಷತ್ರಿಕನು ಹರಿಶ್ಚಂದ್ರನನ್ನು ನಾನಾ ರೀತಿಯಲ್ಲಿ ಹಿಂಸೆ ನೀಡಿದ್ದು, ಹೆಂಡತಿ, ಮಗ ಕೊನೆಗೆ ತನ್ನನ್ನು ಮಾರಿಕೊಂಡ ಹರಿಶ್ಚಂದ್ರನ ದೌರ್ಭಾಗ್ಯ ಕೊನೆಗೆ ಹೆಂಡತಿಯನ್ನು ಶಿರಶ್ಛೇಧನ ಮಾಡುವ ಕೆಲಸ ತನಗೆ ಬಂದ ಪ್ರಸಂಗ - ಹೀಗೆ ಇದು 'ಹರಿಶ್ಚಂದ್ರ ಕಾವ್ಯ'ದ ಕಥೆಯನ್ನು, ಅನೇಕ ಪದ್ಯಗಳನ್ನು ನಿದರ್ಶನವಾಗಿ ನೀಡುತ್ತಾ, ವಿಮರ್ಶಿಸುತ್ತಾರೆ.

ಚಂದ್ರಮತಿಯ ಪ್ರಲಾಪದ ಸನ್ನಿವೇಶವಂತೂ ಹೃದಯವಿದ್ರಾವಕವಾದ ಪ್ರಸಂಗವಾಗಿದೆ. ರಾಘವಾಂಕನ ಪ್ರತಿಭೆಯಲ್ಲಿ ವಿಶೇಷ ಗುಣವೆಂದು ತೋರುವ ನಾಟಕೀಯತೆ ಪರಾಕಾಷ್ಠತೆಗೆ ಏರುತ್ತದೆ.ಹೀಗೆ ಒಬ್ಬ ಮಹಾಕವಿಯ ಕೃತಿರತ್ನವನು ಮತ್ತೋರ್ವ ಮಹಾಕವಿ ವಿಮರ್ಶೆಗೆ ಒಳಪಡಿಸಿದ್ದಾರೆ. ಆ ಮಹಾಕವಿಯ ಪ್ರತಿಭೆಯಲ್ಲಿ ಅರಳಿದ ಹೂಗಳನ್ನು, ಈ ಮಹಾಕವಿ ಸಹೃದಯರಿಗೆ ಉಡುಗೊರೆಯಾಗಿ ನೀಡಿದ್ದಾರೆ.

## ಶೈಲಿ

ನವೋದಯ ವಿಮರ್ಶಕರಲ್ಲಿ ಪ್ರಮುಖವಾದ ಹೆಸರು ಎಸ್. ವಿ. ರಂಗಣ್ಣನವರು. ಅವರು ಹೊನ್ನಶೂಲ, ಕಾಳಿದಾಸನಾಟಕ ವಿಮರ್ಶೆ ಮತ್ತು ಶೈಲಿ ಕೃತಿಗಳು ಕನ್ನಡವಿಮರ್ಶೆಗೆ ನೀಡಿದ ಮೌಲಿಕವಾದ ಕೊಡುಗೆಗಳಾಗಿವೆ. ''ಶೈಲಿಯ ವಿಷಯ ಆ ಕಾಲಕ್ಕೇ ಕನ್ನಡಕ್ಕೆ ನವೀನವಾಗಿತ್ತು. ಈ ಕಾಲಕ್ಕೂ ಆ ವಿಷಯವನ್ನು ಕುರಿತು ಕೃಷಿ ಮಾಡಿರುವ ವಿದ್ವಾಂಸರು''[೧] ವಿರಳ ಎನ್ನುತ್ತಾರೆ. ಪುಸ್ತಕದ ಪ್ರಕಾಶಕರು ಇದು ಒಪ್ಪಬೇಕಾದ ಮಾತು .

---

೧. ಎಸ್.ವಿ. ರಂಗಣ್ಣ : ಶೈಲಿ, ಮನೋಹರ ಗ್ರಂಥ ಮಾಲೆ, ೧೯೭೧, ಪುಟ ೧

'ಶೈಲಿ' ಮೂರು ಭಾಗಗಳಲ್ಲಿ ಪ್ರಕಟಗೊಂಡಿರುವ ಕೃತಿ; ಈ ಮೂರು ಭಾಗಗಳ ಪರಿವಿಡಿಯನ್ನು ನೋಡಿದರೆ ಸಾಕು, ರಂಗಣ್ಣ ನವರ ವಿವೇಚನೆಯ ವಿಸ್ತಾರ ವೇದ್ಯವಾಗುತ್ತದೆ.

ಭಾಗ 1:- ಶೈಲಿಯ ಸ್ವರೂಪ -ಶೈಲಿಯ ಮಹತ್ವ , ಭವ್ಯತೆ- ಪಂಪನ ಶೈಲಿ -ರನ್ನನ ಶೈಲಿ - ಕುಮಾರ ವ್ಯಾಸನ ಶೈಲಿ ಮಧ್ಯಮ ಶೈಲಿ- ಸಾಧಾರಣ ಶೈಲಿ .

ಭಾಗ 2 :- ರನ್ನನ ಶೈಲಿ- ರತ್ನಾಕರನ ಶೈಲಿ - ರಾಘವಾಂಕನ ಶೈಲಿ - ರುದ್ರಭಟ್ಟನ ಶೈಲಿ -ಹರಿಹರನ ಶೈಲಿ , ಲಕ್ಷ್ಮೀಶನ ಶೈಲಿ -ನಾಗಚಂದ್ರನ ಶೈಲಿ .

ಭಾಗ 3 :- ನಯಸೇನನ ಶೈಲಿ - ಆಂಡಯ್ಯನ ಶೈಲಿ - ಪುರಂದರದಾಸರ ಶೈಲಿ - ಕನಕದಾಸ - ಶೈಲಿ, ನರಹರಿಯ ಶೈಲಿ - ಸರ್ವಜ್ಞನ ಶೈಲಿ- ಹೊನ್ನಮ್ಮನ ಶೈಲಿ - ಷಡಕ್ಷರದೇವನ ಶೈಲಿ - ಜನಪದಕವಿಯ ಶೈಲಿ,

ಪ್ರಾಚೀನ ಕನ್ನಡ ಸಾಹಿತ್ಯದ ಪ್ರಮುಖರೆಲ್ಲ ಇಲ್ಲಿ ಸಮಾವೇಶ ಗೊಂಡಿದ್ದಾರೆ ಹಾಗೂ ಜನಪದ ಕಾವ್ಯವೂ ಸ್ಥಾನ ಪಡೆದಿರುವುದು ಗಮನಾರ್ಹವಾಗಿದೆ. ಆದರೆ ಪ್ರಾಚೀನ ಗದ್ಯ ಸ್ವರೂಪ ಪರಿಗಣಿತಲಾಗಿಲ್ಲ.

ಈ ಬರಹಗಳಲ್ಲಿ 'ಶೈಲಿಯ ಸ್ವರೂಪ', 'ಶೈಲಿಯ ಮಹತ್ವ ಭವ್ಯತೆ', 'ಮಧ್ಯಮ ಶೈಲಿ', 'ಸಾಧಾರಣ ಶೈಲಿ' -ಇವು ತಾತ್ವಿಕ ಶೈಲಿ ಮೀಮಾಂಸೆಯ ಲೇಖನಗಳು ; ಉಳಿದವು ಅನ್ವಯಿಕ ಬರಹಗಳಿಗೆ ಸಂಬಂಧಿಸಿದವು .

ಶೈಲಿಯ (style) ಲ್ಯಾಂಟೀನ್ ಭಾಷೆಯ ' styles ' ಪದದಿಂದ ಜನ್ಯವಾಯಿತೆಂದು ಆಮೇಲೆ ಮಾನವರ ಯಾವ ವ್ಯವಹಾರಕ್ಕೆ ಬೇಕಾದರೂ ಅನ್ವಯಿಸಬಹುದಾದ ವಿಶಾಲಾರ್ಥ ಅದಕ್ಕೆ ಪ್ರಾಪ್ತವಾಯಿತೆಂದೂ ಹೇಳಿ, ಅದಕ್ಕೆ ನಾಲ್ಕು ಅರ್ಥಗಳಿರುವುದನ್ನು ಸೂಚಿಸುತ್ತಾರೆ .

1 . ಒಬ್ಬ ವ್ಯಕ್ತಿಯ ನಡೆನುಡಿ. ಹಾವ ಭಾವ ಒಲವು ವಯ್ಯಾರಗಳಲ್ಲಿ ಗೋಚರವಾಗುವ ವಿಕಾಸವನ್ನು ಸೂಚಿಸಿದಂತೆ . ಇಲ್ಲಿ ಶೈಲಿ ಎಂದರೆ ವಿಕಟ ವ್ಯಕ್ತಿತ್ವ , ಲಕ್ಷಣ ವೈಪರೀತ್ಯ ವೆಂದಾಯಿತು. 2 ಅವನಲ್ಲಿ ಚಿಂತನೆಗ ಳುಂಟು ಆದರೆ ಶೈಲಿಯಿಲ್ಲ , ಎಂದರೆ ಅವನು ತನ್ನ ಭಾವ ಭಾವನೆಗಳನ್ನು ಸ್ಪಷ್ಟವಾಗಿ ಇತರರಿಗೆ ಅರ್ಥವಾಗುವ ಹಾಗೆ ತಿಳಿಸಲಾರ ಎಂದು ತಾತ್ಪರ್ಯ . ಇಲ್ಲಿ ಶೈಲಿಗೆ ಸರ್ವಸಾಮಾನ್ಯವಾದ ಒಂದು ಅರ್ಥವನ್ನು ಕೊಟ್ಟಿದೆ . 3 ಷೇಕ್ಸ್‌ಪೀಯರನಿಗೆ ಶೈಲಿಯಿದೆ ಎಂದಾಗ ಘನವಾದ ಬರವಣಿಗೆಯ ಮಹಿಮೆಯನ್ನು ಸ್ತುತಿಸಿದಂತೆ . ಇಲ್ಲಿ ಶೈಲಿಗೆ ಅಸಾಧಾರಣವಾದ ಅರ್ಥದೊರಕಿತು. 4. ಕವಿಯ ಭಾವ ಭಾವನೆಗಳೂ ವ್ಯಕ್ತಿ ಶಕ್ತಿಯೂ ಭಾಷೆಯ ಮೂಲಕ ಪ್ರಕಾಶಗೊಳ್ಳುವ ವಿಸ್ಮಯ ವಿದ್ಯಾಮಾನವನ್ನು ನಿರ್ದೇಶಿಸಲು ಸಾಹಿತ್ಯ ವಿಮರ್ಶೆ ಪ್ರಯೋಗಿಸುವ ಶೈಲಿಯೆಂಬ ಪಾರಿಭಾಷಿಕ ಪದವೇ ನಾಲ್ಕನೆಯ ಅರ್ಥ''[೨]. ಇಲ್ಲಿ ಪ್ರಕೃತವಾದದ್ದು ಕಡೆಯ ಅರ್ಥ. ಶೈಲಿಯ ಬಗೆಗಿನ ಪಾಶ್ಚಾತ್ಯ ವಿಮರ್ಶಕರ ವಿಭಿನ್ನ ನಿಲುವುಗಳನ್ನು

೨. ಎಸ್.ವಿ. ರಂಗಣ್ಣ : ಶೈಲಿ, ಮನೋಹರ ಗ್ರಂಥ ಮಾಲೆ, ೧೯೭೧, ಪುಟ ೨೮

ಇಲ್ಲಿ ಆರುಗುಂಪುಗಳನ್ನಾಗಿ ಸಂಗ್ರಹಿಸಿದ್ದಾರೆ

1) ಸ್ಟೆಂಡ್ಹಲ್ : ಶೈಲಿಯೆಂಬುದು ಇಷ್ಟ: ಒಂದು ಭಾವನೆ ಕೊಡಬಹುದಾದ ಪ್ರತಿಫಲ ವನ್ನು ಪರಿಪೂರ್ಣವಾಗಿ ಕೊಡುವುದಕ್ಕೆ ಅಗತ್ಯವಾದ ಎಲ್ಲಾ ಪರಿಕರಗಳನ್ನು ಕೂಡಿಸಿ ಕೊಡುವುದು''. ಮ್ಯಾಥ್ಯೂ ಆರ್ನಾಲ್ಡ್‌ನ ಕೆಲವು ಮಾತುಗಳು ಈ ಅಭಿಪ್ರಾಯಕ್ಕೆ ಹತ್ತಿರವಾಗುತ್ತದೆ ಎನ್ನುತ್ತಾರೆ , ರಂಗಣ್ಣ:

2) ಶೈಲಿಯ ಭಾವನೆಯ ಉಡುಪು ಎಂಬ ನಂಬಿಕೆ ಬಹಳಕಾಲದಿಂದ ಇತ್ತು . ಈ ಬಗ್ಗೆ ಪೋಪ್ ಕವಿಯ ವ್ಯಾಖ್ಯಾ ನ ವೆಂದರೆ 'ಆಲೋಚನೆಯ ಉಡಿಗೆ ಶೈಲಿ ; ಅದು ಎಷ್ಟು ಸೂಕ್ತವಾದರೆ ಅಷ್ಟು ಸಭ್ಯತೆ --'' ಜೆ .ಎ. ಸಿಮನ್ಸ್ ಕೂಡ' ಆಲೋಚನೆಗೆ ಸಾಕಷ್ಟು ಸಮರ್ಪಕ ಭಾಷೆಯನ್ನು ತೋರಿಸುವ ಸಮಾರಂಭವೇ ಶೈಲಿ'' ಎಂದಿದ್ದಾನೆ .

3. 'ಶೈಲಿ ಲೇಖಕನ ಅಂಗಿಯಲ್ಲ, ಚರ್ಮ ಎಂಬುದು ಕಾರ್ಲೈಲ್‌ನ ತಿದ್ದುಪಡಿ'. ಅದನ್ನು ಫ್ರೂಡ್ ಹೀಗೆ ವಿಶದೀಕರಿಸಿದ್ದಾನೆ :' 'ಅಂಗಿಯನ್ನು ಆಚೆಗೆ ತೆಗೆದಿಡುಬಹುದು , ಶೈಲಿ ಆಗಲ್ಲ. ಚರ್ಮ ಹೇಗೆ ಜೀವಿಗೆ ಅವರ್ಜನೀಯವಾದ ಒಂದು ಭಾಗವೋ ಹಾಗೆ. ಶೈಲಿ''. ಈ ಹೇಳಿಕೆ ಕೊಂಚ ಸಮಾಧಾನಕರವಾದರೂ , ಈ ಅಭಿಮತವನ್ನು ಮಿಂಚಿ ಮುಂದೆ ಹೋಗಬೇಕು ಎನ್ನುತ್ತಾರೆ, ರಂಗಣ್ಣ .

4. 'ಕೆಲವರ ಮತದಲ್ಲಿ ಶೈಲಿ ವದನ ತೇಜಸ್ವಿನಂತೆ'. ಇದು ಟಿ. ಹಾಬ್ಸನ ಹೇಳಿಕೆ : '' ಸುಂದರ, ಕಾವ್ಯದೇವಿಯ ಮುಖ ಬಣ್ಣದ ಹೊಳಪೇ ಶೈಲಿ ''. ಆದರೆ ರಂಗಣ್ಣ ಅವರ ಪ್ರಕಾರ ಇದೂ ಸಮರ್ಪಕವಾದ ನಿಲುವಲ್ಲ.

5. 'ಶೈಲಿ ಆಲೋಚನೆಯ ಅವತಾರ ' ಎನ್ನುತ್ತಾನೆ ವರ್ಡ್ಸ್‌ವರ್ತ್. 'ಈ ಟೀಕೆ ಕವಿಯ ಭಾವಕ್ಕೂ ಭಾಷೆಗೂ ಇರುವ ಅನ್ಯೂನ್ಯ ಗೆಳೆತನವನ್ನು ಚೆನ್ನಾಗಿ ವಿಶದಿಗೊಳಿಸದೆ' ಎಂಬುದು ರಂಗಣ್ಣ ನವರ ಅಭಿಪ್ರಾಯ.

6. ಪಾಶ್ಚಾತ್ಯರಲ್ಲಿ ಬಹಳ ಒಪ್ಪಿಗೆಯಾದ ಸಿದ್ಧಾಂತ ವೆಂದರೆ, 'ಕವಿಯೇ ಶೈಲಿ' ಎಂಬ ಬಫನ್ನನ ಸಾಮತಿ.

ಗಿಬ್ಸನ್ , ಬೆನ್‌ಜಾನ್ಸನ್ ಮುಂತಾದವರೂ ಅವರನ್ನು ಸಮರ್ಥಿಸಿದ್ದಾರೆ, 'ಶೈಲಿ ಮಾನವನ ಆತ್ಮ' ಎಂಬ ರೋಲಾನ್‌ನ ವ್ಯಾಖ್ಯೆಯಿಂದ 'ಸಾಹಿತ್ಯವೆಂದರೆ ಶೈಲಿ, ಶೈಲಿಯೇ ಸಾಹಿತ್ಯ ' ಹಾಗೂ 'ಕವಿಯಂತೆ ಶೈಲಿ, ಶೈಲಿಯ ಕವಿ' ಎಂಬ ವಾದ ಸಿದ್ಧವಾಗುತ್ತದೆ . 'ಇದರಲ್ಲಿ ಸ್ವಲ್ಪ ಸತ್ಯಾಂಶವಿದೆ' ಎನ್ನುವ ತೀರ್ಮಾನ ರಂಗಣ್ಣನವರು .

ಹೀಗೆ ಪಾಶ್ಚಾತ್ಯರ ಶೈಲಿಕುರಿತ ಹೇಳಿಕೆಗಳನ್ನು ಚರ್ಚಿಸಿ ರಂಗಣ್ಣನವರು ನೀಡುವ ತೀಮಾನ ಹೀಗಿದೆ ''ವಸ್ತುವಿನಿಂದ ಶೈಲಿಯನ್ನು ಬಗೆಯಲಾಗುವುದಿಲ್ಲ, ವಸ್ತು ಪರಮೇಶ್ವರನಾದರೆ, ರೀತಿ (ಶೈಲಿ) ಪಾರ್ವತಿ ;

ಕಾವ್ಯ ಅನಿಂದ್ಯವಾದ ಅರ್ಧನಾರೀಶ್ವರ, ಈ ತೀರ್ಮಾನ ಸಮರ್ಥವಾಗಿದೆ''[೩].

ರಂಗಣ್ಣನವರು ಶೈಲಿಯಲ್ಲಿ ನಾಲ್ಕು ಪ್ರಕಾರಗಳನ್ನು ಕಲ್ಪಿಸುತ್ತಾರೆ :

1) ಮಹಾ ಶೈಲಿ (Greant style) ; 2) ಅದಕ್ಕಿಂತ ಎತ್ತರದ ಭವ್ಯಶೈಲಿ (Grand style) 3) ಮಧ್ಯಮ ಶೈಲಿ 4) ಸಾಮಾನ್ಯ ಶೈಲಿ ( ಕುಮಾರವ್ಯಾಸನ ದು ಮಹಾಶೈಲಿಯಾದರೆ, ನರಹರಿಯದು ಸಾಮನ್ಯ ಶೈಲಿ, ರಾಘವಾಂಕನದು, ಮಧ್ಯಮ ಶೈಲಿ ಎನ್ನುತ್ತಾರೆ).

ಮಹಾಶೈಲಿಯ ಲಕ್ಷಣಗಳೆಂದರೆ : ''ಅರ್ಥಪುಷ್ಟಿ, ರಾಗಾವೇಶದ ಉತ್ತರ, ತುಂಬುಧ್ವನಿ, ಸೂಕ್ತ ಸುಂದರ ಶಬ್ದರಾಶಿ, ಘನಗಂಭೀರ ಧೋರಣೆ, ಕವಿಯ ಆತ್ಮಪ್ರತ್ಯೆಯದ ಉಜ್ವಲತೆ, ಸಂಪೂರ್ಣ ತನ್ನತನ, ಮತ್ತಾರೂ ಎರವಲು ತೆಗೆದುಕೊಳ್ಳಲಾಗದ ವೈಶಿಷ್ಟ. ಭವ್ಯಶೈಲಿಯ ಕುರುಹುಗಳೆಂದರೆ, 'ಪದಾರ್ಜನೆ ಪದಯುಕ್ತತೆ, ಪಾದಸತ್ತಿಯಲ್ಲಿ ಇದಕ್ಕಿಂತ ಮುಂದೆ ಹೋಗಲಾಸಾಧ್ಯ ಎಂದು ತೋರಬೇಕು ; ಒಂದಕ್ಷರವನ್ನು ಕೂಡ ಬಿಡಲಾಗಲೀ ಬದಲಾಯಿಸಲಾಗಲೀ ಆಗಕೂಡದು . ಆ ಹೇಳಿಕೆ ಭಾಷೆಯಲ್ಲಿ ಮಾತುಗಾರಿಕೆಯ ಕಟ್ಟುಕತೆಯೆಂದು ಭಾಸವಾಗಬೇಕು . ಭಾವನೆಯ ಭಾರಿ ಗಣಿಯ ಭಾಗಿಲೊಂದು ತೆರೆದು ಇಷ್ಟೊಂದು ಐಶ್ವರ್ಯ ಉಂಟೇ ಎಂದೆನ್ನಿಸಬೇಕು . ಅಲ್ಲದೆ ಅದರಲ್ಲಿ ಅಡಗಿರಬೇಕು ಒಂದು ಧ್ವನಿಯಲ್ಲಿ , ಧ್ವನಿ ಪರಂಪರೆ''[೪] ಎಂದು ಹೇಳಿ ಇವೆಲ್ಲಾ ಕಾರಣಗಳಿಂದ ಯಾವುದೋ ಅಪೂರ್ವ , ವಿಶಾಲ , ಅಗಾಧ ಭವ್ಯತೆಯ ದಿವ್ಯಾನುಭವದ ಸ್ವಲ್ಪ ಸಂಪರ್ಕ ನಮಗೆ ಒದಗಿ, ಪ್ರತಿಭೆ ಕುದುರಿ, ಹೃದಯ ಹುರಿಗೊಂಡು, ಸಂತೋಷತಾನೇ ತಾನಾಗಿ, ಕಾವ್ಯಾನಂದ ನಿಜವಾಗಿಯೂ ಬ್ರಹ್ಮಾನಂದ ಸಹೋದರನಾಗುತ್ತದೆ:

ಮಧ್ಯಮ ಶೈಲಿಯ ಕವಿಗಳನ್ನು ಕುರಿತು ರಂಗಣ್ಣನವರ ೀಅಭಿಪ್ರಾಯ ಹೀಗಿದೆ, ಸ್ಮೃತಿಶಕ್ತಿ, ಬುದ್ಧಿಶಕ್ತಿ ಕಲ್ಪನಾಶಕ್ತಿಗಳನ್ನು ಬಲು ಬಹಳವಾಗಲ್ಲದಿದ್ದರೂ ಹೊಗಳಿಸಿಕೊಳ್ಳುವಷ್ಟು ಹೆಚ್ಚಿನ ಅಳತೆಯಲ್ಲಿ ಪಡೆದಿರುವ ಬಲ್ಲಿದ ಕವಿಗಳುಂಟು ; ಅವರಿಗೆ ಗ್ರಂಥಜ್ಞಾನದಲ್ಲಿ ಕೊರತೆಯಿಲ್ಲ ; ಮನುಷ್ಯ ಸ್ವಭಾವದ ಮತ್ತು ಲೋಕದ ನಡವಳಿಕೆಯ ಪರಿಚಯವೂ ಅನಲ್ಪ . ನಿಸ್ಸಂದೇಹೆ ವ್ಯಕ್ತಿ ಬಲ ಅವರಲ್ಲಿರುವುದರಿಂದ ಅವರೂ ಸಾಮಾನ್ಯರ್ಥದಲ್ಲಿ ದೊಡ್ಡ ಕವಿಗಳೆ; ಅತಿಶಯ ವ್ಯಕ್ತಿತೇಜಸ್ಸಿನ ನಿಸ್ಸಂದೇಹ ಮಹಾಕವಿಗಳು ಇರುವುದರಿಂದ ಅವರನ್ನು ಮಧ್ಯಮ ಕವಿಗಳೆಂದು ಕರೆಯಬೇಕು . ಮಹಾಕವಿಯ ಸಂಯಮ ಅನೇಕ ವೇಳೆ ಮಧ್ಯಮ ಕವಿಗಳಿಗಿರುವುದಿಲ್ಲ ಎನ್ನುತ್ತಾರೆ .

ಸಾಧಾರಣ ಶೈಲಿಯನ್ನು ಕುರಿತು ''ಮಹಾಕವಿ ವಿರಚನೆಯಲ್ಲಿ ಮೊದಲಿನಿಂದ ಕೊನೆಯವರೆಗೂ ಎಲ್ಲವೂ ಮಹತ್ತಿನ ವಾಕ್ಯವೇ ಎಂದು ಭ್ರಾಂತಿಪಡಬಾರದು, ಮಧ್ಯಮತೆಯನ್ನು ಮೀರದ ಹೇಳಿಕೆಯೂ ಸಾಧಾರಣ ಹೇಳಿಕೆಯೂ ಅಲ್ಲಲ್ಲಿ ಅನಿವಾರ್ಯವಾಗಿ ಒಂದೇ ಬರುವುವೆ. ಸಾಧಾರಣ ಶೈಲಿಯ ಲೇಖನ ರಸವತ್ತು

---

೩. ಎಸ್.ವಿ. ರಂಗಣ್ಣ : ಶೈಲಿ, ಮನೋಹರ ಗ್ರಂಥ ಮಾಲೆ, ೧೯೭೧, ಪುಟ ೪೬

೪. ಅದೇ ಪುಟ ೪೯

ಅಲ್ಲ ತೀರಾ ನಿರಸವೂ ಅಲ್ಲ ಎಂಬ ಗತಿಯಲ್ಲಿ ಸಾಗುತ್ತಿದ್ದರೂ ಆಗಾಗ ಕವಿಯ ಬುದ್ಧಿ ಸರಿಸಿ ಚುರುಕಾದಾಗ ಸ್ವಲ್ಪ ಬೆರಗಾಗಿಸುವ ಸ್ವಲ್ಪ ಹೊಸತಾದ ಹೇಳಿಕೆಯಿಂದ ಕಳೆಗೊಳ್ಳುತ್ತದೆ, ಮೆಚ್ಚಲರ್ಹವಾಗುತ್ತದೆ . ಅನೇಕ ಸಾಧಾರಣ ಕವಿಗಳಲ್ಲಿ ಶಬ್ದಚಮತ್ಕಾರ ತಾಂಡವ ವಾಡುತ್ತದೆ , ಹಲವರು ಸ್ವಪ್ರತಿಷ್ಠೆಯಲ್ಲಿ ನಿಸ್ಸೀಮರು. ಬಂಡವಾಳ ಬಲುಕಡಿಮೆ ಇದ್ದರೂ ಅವರ ಬಡಾಯ ಭಾರಿ ''[೫] ಎನ್ನುತ್ತಾರೆ ರಂಗಣ್ಣ.

ಹೀಗೆ ಕವಿ ಶೈಲಿಯ ಗುಣಗಳನ್ನು ಹೇಳಿ ಅನಂತರ ತಾವು ಆಯ್ಕೆ ಮಾಡಿಕೊಂಡ ಕವಿಗಳನ್ನು ನಿರ್ಧಿಷ್ಟವಾಗಿ ಭಾಷೆ, ಶೈಲಿಗಳ ದೃಷ್ಠಿಯಿಂದ ಮಾತ್ರವಲ್ಲದೆ ಸಮಗ್ರವಾಗಿಯೂ ವಿಚಾರಮಾಡುತ್ತಾರೆ .

ಪಂಪನ ಶೈಲಿಯನ್ನು ಕುರಿತು ಹೇಳುವಾಗ ಅವನ ಸ್ವಭಾವವನ್ನು ರಂಗಣ್ಣನವರು ಪರಿಗಣಿಸುವುದು ಸಹಜವಾಗಿದೆ. ಏಕೆಂದರೆ 'ಶೀಲ ಸ್ಯೇಯಂ ಶೈಲಿ' ಈ ದೃಷ್ಠಿಯಿಂದ 'ಶ್ರಮ ಹಾಗೂ ಪ್ರಸನ್ನಗುಣ', ಅವ್ಯಾಕುಲತೆ ಅವನ ಶೈಲಿಯ ತಿರುಳು ಎಂದು ತೀರ್ಮಾನಿಸುತ್ತಾರೆ .

ಪಂಪನ ಶೈಲಿಯ ರಂಗಣ್ಣನವರ ನಿಲುವುಗಳೆಂದರೆ ಒಂದು ಪದ್ಯವನ್ನು ಪರಿಶೀಲಿಸಿ ಇದು ಪಂಪನದೇ ಎಂದು ದೃಢವಾಗಿ ಹೇಳಬಹುದು; ಆ ಶೈಲಿ ಇನ್ನಾವ ಕನ್ನಡ ಕವಿಗಳಿಗೂ ಇಲ್ಲ , ಅಸಾಧ್ಯ ; ಅದೊಂದು ಅಸಾಧಾರಣ ಶೈಲಿ ಎನ್ನುತ್ತಾರೆ . ಮಾತಿನ ಸಲುವಾಗಿ ಮಾತನ್ನು ಬೆಳೆಸುವುದು ಪಂಪನ ಮನೋಧರ್ಮಕ್ಕೆ ವಿರುದ್ಧ.ಮಿತ ವಚನ ಅವನ ಹವ್ಯಾಸ.ಯಾವ ಶಬ್ದಬಂಡಾರದ ಗೂಡವೆಗೂ ಪಂಪ ಹೋಗತಕ್ಕವನಲ್ಲ, ಕನ್ನಡದ ಉಸಿರಾದುದರಿಂದ ಪ್ರಾಸವೊಂದು ಅವನಲ್ಲಿಯೂ ಪುಷ್ಕಳವಾಗಿದೆ.ಪಂಪನ ಶೈಲಿಯೂ ಶಕ್ತಿಗರ್ಭಿತವಾದ ಶೈಲಿ; ಸಂಸ್ಕೃತ ಭಾಷೆಯ ಪ್ರಭಾವವಿದ್ದರೂ ಕನ್ನಡದ್ದೇ ಮೇಲುಗೈ ಎಂದು ಹೇಳುವಲ್ಲಿ ಪಂಪನನ್ನು ಕುರಿತು ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ . ಏಂಕೆದರೆ ಪಂಪನ ಕಾವ್ಯವನ್ನು ಓದಿದಾಗ ನಮಗೂ ಇದು ವೇದ್ಯವಾಗುತ್ತದೆ.

ರನ್ನನ ಶೈಲಿಯ ಬಗ್ಗೆ ಹೇಳುವಾಗ ರನ್ನನ ಶೈಲಿ ಮೊದಲಿನಿಂದ ಕೊನೆಯವರೆಗೂ ವೀರವತ್ತಾದ ಮಹಾಶೈಲಿ; ಸರಳವೂ ಅವಶ್ಯಕವೂ ತ್ವರಿತವೂ ಆದ ಗಮನವೇ ರನ್ನನಿಗೆ ಹಿತ ; ಆತನದು ರುದ್ರನಾಟಕಕ್ಕೆ ಸುಸಜ್ಜಿತವಾದ ಶೈಲಿ

ಸಂಸ್ಕೃತದ ಮೇಲೆ ಅವನಿಗೆ ವ್ಯಾಮೋಹ, ಓಜಸ್ಸು ಉದಾರತೆಗಳ ಸಂಯೋಗದಿಂದ ಜನಿತವಾದ ಔನತ್ಯ ಅವನಲ್ಲಿ ನಿರತಿಶಯ ಕಾವ್ಯಶೋಭಾಕರ, ಎಂದು ಯೋರೋಪಿನ ಸಾಹಿತ್ಯ ಅರಿತವರಿಗೆ ರನ್ನನ್ನು ಓದುವಾಗ ಹೋಮರ್ , ದಾಂಟೆ , ಮಿಲ್ಟನ್ನರ ನೆನಪು ತರುತ್ತದೆಂಬ , ಹೇಳಿರುವ ಮಾತುಗಳು ಒಪ್ಪುವಂಥವು. ಆದರೆ ಪಂಪನಲ್ಲಿಲ್ಲದ ಸಾಹಿತ್ಯ ಪ್ರಜ್ಞೆ ರನ್ನನಲ್ಲಿದೆ ಎಂಬುದು ಒಪ್ಪಲಾಗದ ಅಭಿಪ್ರಾಯ . ರನ್ನನ ಅನುಭವ ಅವೋಘ, ಪ್ರತಿಭೆ ಅಸದೃಶ , ಕವಿತ್ವ ಹಿಮಾಲಯವನ್ನೇರಿದ ಮಹಾಕವಿ ಎಂಬಂಥ ಮಾತುಗಳು

೫. ಎಸ್.ವಿ. ರಂಗಣ್ಣ : ಶೈಲಿ, ಮನೋಹರ ಗ್ರಂಥ ಮಾಲೆ, ೧೯೭೧, ಪುಟ ೬೪

ಉತ್ಪ್ರೇಕ್ಷೆಯಿಂದ ಹೇಳಿದಂತಿದೆ ಎಂದು ನನಗನಿಸುತ್ತದೆ.

ಕುಮಾರವ್ಯಾಸ ''ರೂಪಕ ಸಾಮ್ರಾಜ್ಯ ಚಕ್ರವರ್ತಿ' ಎಂಬ ರಂಗಣ್ಣನವರ ಉಕ್ತಿ ಬಹಳ ಪ್ರಸಿದ್ಧವಾಗಿದೆ. ಕನ್ನಡ ನುಡಿಗೆ ಕಳಸವಿಟ್ಟ ಕವಿಗಳಲ್ಲಿ ನಾರಣಪ್ಪನು ಒಬ್ಬ. ಎಂದೂ ಕವಿಯು ಶ್ರೀಕೃಷ್ಣನಿಗೆ ಮೀಸಲಾಗಿ ಭಕ್ತಿಯಿಂದ ನೇಯ್ದಿರುವ ಈ ಭಾರತ ಮಡಿವಸ್ತ್ರದಲ್ಲಿ ಹಾಸುಕನ್ನಡ, ಹೊಕ್ಕು ಕನ್ನಡ, ಅಲ್ಲಲ್ಲಿ ಬರುವ ಬಣ್ಣದನೂಲು ಸಂಸ್ಕೃತ; ಹಾಗೂ ಶೈಲಿಯ ವಿಚಾರದೆಲ್ಲಾ ಕವಿ ಪ್ರತಿಭೆಯಲ್ಲೂ ನಾರಣಪ್ಪನಿಗೆ ಸ್ವಲ್ಪ ಮಟ್ಟಿಗೆ ಮಹಾಕವಿ ಷೇಕ್ಸ್‌ಪಿಯರ್‌ನ ಸಾಮ್ಯ''[೬] ಎಂಬ ಹೇಳಿಕೆಗಳು ಸಮರ್ಥಿವಾಗಿದೆ.

ಜನ್ನನ ಶೈಲಿಯ ಬಗ್ಗೆ ರಂಗಣ್ಣನವರು ಹೇಳುಲ ಮಾತುಗಳು :''ಕನ್ನಡ ನುಡಿಯ ವೈಭವದ ಓಟ ಯಾವ ವೇಗದಲ್ಲಿದ್ದರೆ ಹಿತ ಸಮರ್ಪಕತ್ವದ ಎಲ್ಲೆಯನ್ನು ಮುಟ್ಟುತ್ತದೋ ಆ ವೇಗದ ಪರಿಚಯೋತ್ಕರ್ಷ ಬೇಕಾದರೆ ಕುಮಾರವ್ಯಾಸ ರನ್ನರನ್ನು ಬಿಟ್ಟರೆ ಕವಿ ಜನಾರ್ಧನನೇ ಶರಣು ; ಅಪೂರ್ವ ಲಾಂಛನದ ಸಮ್ಮೋಹನ ಶಕ್ತಿ ಯಿಂದ ವಿಶಿಷ್ಟವಾಗಿದೆ ಜನ್ನನ ಲಲಿತ ಶಯ್ಯ ; ನಾದ ಸಂಕೀರರ್ಣತೆಯೇ ಅವನ ವಚೋವಿಲಾಸದ ಗುಟ್ಟು .........ನೀಟಾದ ಸಂಮಿಶ್ರತೆಯ ಸಂಸ್ಕೃತ ರೀವಿ ಜನ್ನನ ಸೊಗಸು; ಮಾತನಾಡುವ ಕನ್ನಡ, ಗ್ರಾಂಥಿಕ ಕನ್ನಡ, ಸಮಸಂಸ್ಕೃತ ಮೂರು ತಮ್ಮ ತಮ್ಮ ಕಟಾವನ್ನು ತಂದು ಸುರಿದು ತುಂಬಿಸಿವೆ ಜನ್ನಮಯ್ಯನ ಶಬ್ದ ಕೂಟವನ್ನು''[೭] ಎಂದು ಜನ್ನನ ಶೈಲಿಯನ್ನು ಕುರಿತ ಮಾತುಗಳು ಸ್ಪಷ್ಟವಾಗಿದೆ ಆದರೂ ಮುಂದೆ ಅವನ ಸಾಹಿತ್ಯ ಸಂತಾನವೆಲ್ಲಾ ಬಹುಮಟ್ಟಿಗೆ ಸಾಂಪ್ರಾದಾಯಿಕ ನಮೂನೆಗಳ ಪಡಿಯಚ್ಚು ಎಂಬ ಉಕ್ತಿ ಅವನ ಪ್ರಶಂಸೆಗಳನ್ನೆಲ್ಲ ವಿರೋಧಿಸುವಂತಿದೆ.

ನಾಗಚಂದ್ರನನ್ನು ಕುರಿತು ಸರಳ ಶೈಲಿಯ ಲೇಖಕರಲ್ಲಿ ಪ್ರಶಸ್ತಿಗಾಗಿ ವೇಲಾದವಾದಲ್ಲಿ ನಾಗಚಂದ್ರನೊಬ್ಬ ಗಣ್ಯ ಸ್ವರೂಪ ಎಂದಿದ್ದಾರೆ. ಹರಿಹರನು ಉತ್ಸಾಹಾಧಿಕ್ಯ ಸ್ವಂತಲಕ್ಷಣ ಎಂದು ಸರಿಯಾಗಿಯೇ ಹೇಳಲಾಗಿದೆ 'ರಗಳೆಯಕವಿ' ಎಂದು ಕರೆದು ಅವನಿಗೆ ಮಾಡಿರುವ ಅನ್ಯಾಯ ಎನ್ನುತ್ತಾರೆ. ಆಂಡಯ್ಯ ಹೆಸರಾದುದು ಅಚ್ಚಗನ್ನಡದಿಂದ ಎನ್ನುತ್ತಾರೆ.

ಜನಪದ ಕವಿಯ ಕುರಿತು ಅಲಂಕಾರ ವಕ್ರತೆ ಯಾವೂದೂ ಇಲ್ಲದ . ಬಿಡಗು ಬಿನ್ನಾಣಕ್ಕೆ ಬಯಸಿ ಬಾಯ್ಬಿಯಿ ಬಿಡದ ಸಾಚಾ ಮಾನ್ಯತೆ ಜನಗೀತದ ಪ್ರಶಸ್ತಿ ಗುಣ ಎಂದಿದ್ದಾರೆ. ಹಾಗೂ ಲಕ್ಷ್ಮೀಶನೊಬ್ಬ ಉತ್ಕೃಷ್ಟ ಕಥೆಗಾರ ಎಂದಿದ್ದಾರೆ. ಸರ್ವಜ್ಞ ವೃತ್ತಿಯಿಂದಲೂ, ಆಸಕ್ತಿಯಿಂದಲೂ ನೀತಿಸಾರುವ ಕವಿ ವಿಡಂಬನೆಯಲ್ಲಿ ನಯನುಣುಪು ಕಡಿಮೆ, ಚಾಟಿ ಏಟನ್ನು ಹಾಕುವುದರಲ್ಲಿ ಅವನ ಪ್ರವೀಣ ಎನ್ನುತ್ತಾರೆ ರಂಗಣ್ಣ. ಪುರಂದರ ದಾಸನ ಮಹೋನ್ನತ ಕೊಡುಗೆ ಯಾವುದೆಂದರೆ, ಅವನು ಅತ್ಯಾಸಕ್ತಿಯಿಂದ ಪರಿಪೂರ್ಣ ಮಮತೆಯಿಂದ ಶಿಲ್ಪಿಗೈದು ನಿಲ್ಲಿಸಿ ರುವ ಶಿಶುಕೃಷ್ಣ ಕಲ್ಪನೆ. ಸಾಹಿತ್ಯ ಮಂದಿರಕ್ಕೆ ಅವನಿಗೆ

---

೬. ಎಸ್.ವಿ. ರಂಗಣ್ಣ : ಶೈಲಿ, ಮನೋಹರ ಗ್ರಂಥ ಮಾಲೆ, ೧೯೭೧, ಪುಟ ೮೭

೭. ಅದೇ ಪುಟ ೧೦೩

ಹೆಬ್ಬಾಗಿಲಿನಿಂದಲ್ಲವಾದರೂ ಪಕ್ಕಾದ ಬಾಗಿಲಿನಿಂದ ಪ್ರವೇಶವಿದೆ ಎನ್ನುವಲ್ಲಿ ಪುರಂದರರ ಸಾಹಿತ್ಯತ್ವಕ್ಕೆ ಮಿತಿಯಿದೆ ಎಂದು ಹೇಳಿದಂತಿದೆ. ಕನಕದಾಸನನ್ನು ಕುರಿತು ನಳಚರಿತ್ರೆ ಸಮರ್ಪಕ ಕಥನ ಕಾವ್ಯ ; ಲಕ್ಷ್ಮೀಶ ಜೈಮಿನಿ ಭಾರತದಲ್ಲಿ ಬರುವ ಚಂದ್ರಹಾಸೋಪಾಖ್ಯಾನವೊಂದೇ ಬಹುಶಃ ಅದಕ್ಕೆ ಮಿಗಿಲು ; ನೇರ ಕಥನದ ಗುಟ್ಟು ಕನಕದಾಸನಿಗೆ ಕೈವಶವಾಗಿತು. ಸಾಧಾರಣತೆ ಸಾಮಾನ್ಯ ಅವನಲ್ಲಿದೆ. ಆದರೆ ಗಟ್ಟಿತೂಕ ಘನತೆ ಔನ್ನತ್ಯ ಕೂಡಿದ ಗಂಭೀರಾಭಿಪ್ರಾಯ ಸ್ಫುರಿಸಿ ನಮ್ಮನ್ನು ಬೆರಗಾಗಿಸುತ್ತದೆ ಎಂದು ಹೇಳುವಲ್ಲಿ ಕನಕನ ಸಮರ್ಥ ಸಾಹಿತ್ಯ ಶಕ್ತಿ ಯನ್ನು ತಿಳಿಸುವಂತಿದೆ. ತೌಲನಿಕ ವಿಮರ್ಶೆ ಗೂ ರಂಗಣ್ಣನವರಲ್ಲಿ, ಎಡೆಯುಂಟು. ಉದಾಹರಣೆಗೆ ಷಡಕ್ಷರಿ ಕಾವ್ಯವನ್ನು ವಿಮರ್ಶಿಸುವಾಗ, ವ್ಯಾಸಭಾರತದಲ್ಲಿ ಕುಮಾರವ್ಯಾಸರಲ್ಲಿ ಬರುವ ಕಿರಾತಾರ್ಜುನೀಯ ಪ್ರಕರಣವನ್ನು ಪರಿಗಣಿಸುತ್ತಾರೆ. ಹಾಗೆ ಪಂಪ ಕುಮಾರವ್ಯಾಸನ ಸಾಹಿತ್ಯ ಬಂಧು, ಸಮೀಪ ಬಂಧು : ಇಬ್ಬರರೂ ಎಷ್ಟೋ ವಿಚಾರಗಳಲ್ಲಿ ಅನಾಯಸ್ ಕವಿತ್ವ ಎಂಬಂಥ ಮಾತುಗಳು ''ರಂಗಣ್ಣನವರ ತೌಲನಿಕ ವಿವೇಚನೆಯ ಪ್ರತೀಕವಾದಂತಿದೆ. ಇಲ್ಲಿ ರಂಗಣ್ಣನವರ ಅನೇಕ ಅಭಿಪ್ರಾಯಗಳು ಚರ್ಚಾಸ್ಪದವಾಗಿದ್ದರೂ ಅವಕ್ಕೊಂದು ಬೆಲೆಯುಂಟೆಂಬುದನ್ನು ಅಲ್ಲಗಳೆಯಲಾಗುವುದಿಲ್ಲ''[೮]. ಒಟ್ಟನಲ್ಲಿ 'ಶೈಲಿ ' ಒಂದು ಪುಟ್ಟ ಕನ್ನಡ ಸಾಹಿತ್ಯಾಚಾರಿತ್ರೆ ಯಂತಿದೆ. ಇಲ್ಲಿ ಒಂದು ಲೋಪವೆಂದರೆ ವಚನಕಾರ ರ ಶೈಲಿ ಕುರಿತು ಪ್ರಸ್ತಾಪ ಇರದೆ ಇರುವುದು. ಇದು ರಂಗಣ್ಣನವರ ಮರೆವೇ ಎನ್ನಿಸುತ್ತದೆ.

'ಶೈಲಿ' ಯ ಮೊದಲೆರಡು ಭಾಗಗಳ ಬಿಗಿ ಮೂರನೇ ಭಾಗದಲ್ಲಿದೆ. ಅದರ ಬರಹಗಳು ಆಳವಾಗಿವೆ. ಕವಿಗಳನ್ನು ಶೈಲಿಯ ದೃಷ್ಟಿಯಿಂದ ಮಾತ್ರವಲ್ಲದೆ ಸಮಗ್ರವಾಗಿ ಅಧ್ಯಯನ ಮಾಡಿದಂತಿದೆ . ಏನೇ ನ್ಯೂನತೆಗಳಿದ್ದರೂ ವ್ಯತ್ಪತ್ತಿ , ವಿಮರ್ಶನ ವಿಚಕ್ಷಣತೆ , ಒಳನೋಟಗಳಿಂದ , ತಕ್ಕ ಮಟ್ಟಿಗೆ ಸ್ವಂತಧಾಟಿ ಧೋರಣೆಗಳಿಂದ ಕನ್ನಡ ವಿಮರ್ಶೆಯ ಕ್ಷೇತ್ರದಲ್ಲಿ 'ಶೈಲಿ' ಒಂದು ಮೈಲಿಗಲ್ಲು. ನಮಗೆ ಶೈಲಿಯ ಅಧ್ಯಯನದಿಂದ ''ರಂಗಣ್ಣನವರ ಬರವಣಿಗೆಯಲ್ಲಿ ಕವಿಯ ಕಾವ್ಯದ ಚರಣಗಳಿರುತ್ತವೆ. ಅವುಗಳ ಮೇಲೆ ವರ್ಣನಾತ್ಮಕವಾದಿ ಭಾಷ್ಯವಿರುತ್ತದೆ. ಅದರಿಂದ ಎಷ್ಟು ರಸಾನುಭವವಾಗಬೇಕೋ ಅಷ್ಟಾಗುತ್ತದೆ. ಆದರೆ ಕಾವ್ಯದ ಅಂತರ್ದರ್ಶನ ಓದುಗರಿಗೆ ದೊರೆಯುವುದಿಲ್ಲ''[೯] ಎಂಬ ಕುರ್ತುಕೋಟಿಯವರ ಹೇಳಿಕೆ ಪೂರ್ತಿ ಸತ್ಯವಲ್ಲ ಎನಿಸುತ್ತದೆ.

## ಕವಿಕಾವ್ಯ ದೃಷ್ಟಿ

ಕನ್ನಡದ ಸಾರಗ್ರಾಹೀ ಸಹೃದಯೀ ಸಾಹಿತ್ಯ ವಿಮರ್ಶಕರಲ್ಲಿ ವಿ.ಸಿ. ಯವರು ಪ್ರಥಮ ಪಂಕ್ತಿಯಲ್ಲಿ ನಿಲ್ಲುವಂಥವರು. ಅವರ ವಿಮರ್ಶನ ಪ್ರಬಂಧಗಳನ್ನು ಓದಿದರೆ ಅವರ ಅಧ್ಯಯನ ಶ್ರದ್ಧೆ, ವಿಮರ್ಶೆಯ ಪರಿಭಾಷೆ ಮತ್ತು ವಿಷಯ ಜ್ಞಾನಗಳ ಪರಿಚಯ ನಮಗಾಗುತ್ತದೆ. ಕನ್ನಡ ಮಾತ್ರವಲ್ಲದೆ

೮. ಸಿ.ಪಿ.ಕೆ. : ಆಲೋಚನ, ೧೯೮೩, ಪುಟ ೫೧.

೯.ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೮.

ಇಂಗ್ಲೀಷ್‌ನಲ್ಲಿಯೂ ಅವರು ವಿಮರ್ಶ ಪ್ರಬಂಧಗಳನ್ನು ಪ್ರಕಟಿಸಿದ್ದಾರೆ, ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳ ವಿಷಯ ವೈವಿಧ್ಯ ಮತ್ತು ವಿಸ್ತಾರ, ವೀ.ಸೀಯವರ ವಿಮರ್ಶನ ಕ್ಷೇಮತೆಗೆ ಹಿಡಿದ ಕನ್ನಡಿಯಂತಿದೆ.

'ಕವಿಕಾವ್ಯ ದೃಷ್ಟಿ' ವಿಮರ್ಶಾ ಸಂಕಲನವು ಕನ್ನಡ ನವೋದಯ ವಿಮರ್ಶಗೆ ವಿ.ಸೀ. ಅವರು ನೀಡಿರುವ ಪ್ರತಿಷ್ಠಿತ ಕೊಡುಗೆಯಾಗಿದೆ. ಹದಿನೈದು ಲೇಖನಗಳ ಸಂಗ್ರಹವಾಗಿರುವ ಈ ಸಂಕಲನದಲ್ಲಿ ಆರು ಲೇಖನಗಳು ಕಲೆ ಮತ್ತು ಸಾಹಿತ್ಯಗಳ ತತ್ತ್ವಾರ್ಥ ಚಿಂತನೆಗಳನ್ನು ಮಾಡುತ್ತೇವೆ.ಇದರಲ್ಲಿ ಆ ತತ್ವ ಪ್ರಯೋಗ ಹೇಗಾಗಿದೆ, ಅರ್ಥ ಸೌಂದರ್ಯ ಹೇಗೆ ಧ್ವನಿಸುತ್ತದೆ ಎಂಬುದರ ವಿವರಣೆಗಳಿವೆ. 'ಕವಿಕಾವ್ಯ ದೃಷ್ಠಿ' ಎಂಬ ಮೊದಲ ಲೇಖನದಲ್ಲಿ ಒಂದು ಕಾವ್ಯ ಕೃತಿಯನ್ನು ಯಾವ ನೆಲೆ - ನಿಟ್ಟುಗಳಿಂದ ನೋಡಬೇಕು ಎಂಬುದರ ಹೃದ್ಯ ನಿರೂಪಣೆಯಿದೆ. ಇದು ಮೂಲತಃ 77 ವರ್ಷಗಳಹಿಂದೆ 1931 ರಲ್ಲಿ ವಿ.ಸೀ. ಯವರು ಮಾಡಿರುವ ಒಂದು ಉಪನ್ಯಾಸ. ಆ ಕಾಲದಲ್ಲಿ ಮಾಸ್ತಿಯವರು 'ಮುದ್ದಣ ಪ್ರಶಸ್ತಿ' ಯಂತಹ ಒಂದೆರಡು ಸಂಪುಟಗಳನ್ನು 'ವಿಮರ್ಶೆ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದ ಕೃತಿಗಳನ್ನು ಬಿಟ್ಟರೆ ಯಾವ ವಿಮರ್ಶಾ ಕೃತಿಗಳು ಬಂದಿರಲಿಲ್ಲ. ಅಂತಹ ಸಂದರ್ಭದಲ್ಲಿ ವಿ.ಸಿ. ಅವರು ಮಾಡಿದ ಚಿಂತನಾ ಉಪನ್ಯಾಸದ ಫಲದಿಂದ 'ವಿಮರ್ಶಾ ಸಂಕಲನ'ವಾಗಿ ಪ್ರಕಟಗೊಂಡ 'ಕವಿಕಾವ್ಯದೃಷ್ಟಿ'ಯು ಅತ್ಯಂತ ಮೌಲಿಕವಾದುದು. ಅದಲ್ಲದೆ, ಐತಿಹಾಸಿಕ ಮಹತ್ವವನ್ನು ಪಡೆದ ಕೃತಿಯಾಗಿದೆ.

'ಕವಿಕಾವ್ಯ ದೃಷ್ಟಿ' ಯಲ್ಲಿ ಉಲ್ಲೇಖಿತ ಮುಖ್ಯ ಲೇಖನವಾದ 'ಭಾರತಗಳ ಶ್ರೀಕೃಷ್ಣ' ಇದು ಮೂಲತಃ ಕುಮಾರವ್ಯಾಸ ಪ್ರಶಸ್ತಿಗಾಗಿ ಬರೆಯದಾದುದ್ದು. ವ್ಯಾಸ-ಪಂಪ-ಕುಮಾರವ್ಯಾಸರಲ್ಲಿ ಶ್ರೀಕೃಷ್ಣ ಚಾರಿತ್ರ್ಯ ಹೇಗೆ ಚಿತ್ರಿತವಾಗಿದೆ ಎಂಬುದನ್ನು ''ವಿ.ಸೀ.ಅವರು ವಿವರಿಸಿರುವ ರೀತಿ ಅವರ ತಲಸ್ಪರ್ಶಿಯಾಗಿ, ತೌಲಗಿಕವೂ ಆದ ವಿಮರ್ಶನಾ ಪ್ರಜ್ಞೆಗೊಂದು ಸಮರ್ಥ ನಿದರ್ಶನವಾಗಿದೆ''[೩]. ಹಾಗೂ ಉಳಿತ ಲೇಖನಗಳೂ ಸಹ ಸಮರ್ಥ ವಿಮರ್ಶಕನ ಮೂಸೆಯಿಂದ ರೂಪುಪಡೆದಿವೆ.

## 'ಕವಿಕಾವ್ಯ ಮಹೋನ್ನತಿ'

ಕನ್ನಡ ನಾಡಿನ ಶ್ರೇಷ್ಠ ವಿಮರ್ಶಕರಲ್ಲಿ ಗೋಕಾಕರ ಸ್ಥಾನ ಉನ್ನತವಾದುದು. 1935 ರಿಂದ 1985 ರ ಅವಧಿಯಲ್ಲಿ ಒಟ್ಟು ಹನ್ನೆರಡು ವಿಮರ್ಶಾ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕವಿಕಾವ್ಯ ಮಹೋನ್ನತಿ, ಸಾಹಿತ್ಯದಲ್ಲಿ ಪ್ರಗತಿ, ನವ್ಯತೆ ಹಾಗೂ ಕಾವ್ಯ ಜೀವನ ಬಹು ಮುಖ್ಯಕೃತಿಗಳು. ಇವುಗಳಲ್ಲಿ 'ಕವಿ ಕಾವ್ಯ ಮಹೋನ್ನತಿ' ಯು ನವೋದಯ ವಿಮರ್ಶೆಯ ಪ್ರಾತಿನಿಧಿಕ ವಿಮರ್ಶಾಕೃತಿಯಾಗಿರುವುದರಿಂದ ಇದನ್ನು ಮಾತ್ರ ನಾನು ವಿವೇಚಿಸುವುದು ಸೂಕ್ತ ವೆನಿಸುತ್ತದೆ. ''ಕವಿಕಾವ್ಯ ಮಹೋನ್ನತಿ'' ಗೋಕಾಕರ ಪ್ರಥಮ

೩. ಕೀರ್ತಿನಾಥ ಕುರ್ತುಕೋಟಿ : ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಮನೋಹರ ಗ್ರಂಥ ಮಾಲೆ, ೨೦೦೨, ಪುಟ ೨೬೮.

ವಿಮರ್ಶಾ ಬರಹ 1924ರಲ್ಲಿ ರಾಯಚೂರಿನಲ್ಲಿ ನಡೆದ ಅಖಿಲ ಕರ್ನಾಟಕ ಲೇಖಕರ ಗೋಷ್ಠಿಯ ಅಧ್ಯಕ್ಷೀಯ ಭಾಷಣದ ಗ್ರಂಥಸ್ತ ರೂಪವಾದ 'ಸಾಹಿತ್ಯದಲ್ಲಿ ಪ್ರಗತಿ'ಯ ನಂತರ ಗೋಕಾಕರು ತಮ್ಮ ಬರವಣಿಗೆಯಲ್ಲಿ ಪ್ರಕಟಿಸಿದ ವಿಮರ್ಶಾ ಗ್ರಂಥ 'ಕವಿಕಾವ್ಯ ಮಹೋನ್ನತಿ'. ಗೋಕಾಕರ ಪ್ರಕಾರ ಸರ್ವತೋಮುಖ ಪ್ರಗತಿಸಾಧಿಸಲು ವ್ಯಕ್ತಿಯ ಅಂತ ರ್ಮುಖತೆ ಹಾಗು ಬಹಿರ್ಮುಖತೆ ಕೂಡಿಯೇ ಸಮಾಜದ ಜೀವನವನ್ನು ಹಿಗ್ಗಿಸಬೇಕು. ಮಹೋನ್ನತ ಸಾಹಿತ್ಯವು ಅಂತರ್ಮುಖ ಇಲ್ಲವೆ ಬಹಿರ್ಮುಖ ವಾಗಿರಬಹುದು. ಈ ಎರಡೂ ಗುಣಗಳು ಒಬ್ಬ ಸಾಹಿತಿಯಲ್ಲಿ ಅಥವಾ ಒಂದು ಕೃತಿಯಲ್ಲಿ ಪಡಿಮೂಡಿರುತ್ತವೆ. ಒಂದು ಮಹಾಕಾವ್ಯದಲ್ಲಿ ಮಹೋನ್ನತಿ ಇರಬೇಕಾದರೆ ಈ ಕೆಳಗಿನ ಅಷ್ಟಾಂಗಗಳು ಅವಶ್ಯ ಎನ್ನುತ್ತಾರೆ. ಗೋಕಾಕ್

1. ಭಾಷೆ ಸಂಪತ್ತು ಮತ್ತು ಶೈಲಿ
2. ತಾಳ, ಲಯ : ಛಂದಸ್ಸು
3. ಕಾವ್ಯವಸ್ತು
4. ರೀತಿ ಅಥವಾ ಕೃತಿ ಶರೀರ
5. ಅರ್ಥ ಗೌರವ ಇಲ್ಲವೆ ವಿಚಾರ ಸಂಪತ್ತು
6. ಭಾವನಾ ಸಂಪತ್ತಿ
7. ಕಲ್ಪನಾ ಶಕ್ತಿ
8. ಕವಿಯ ವ್ಯಕ್ತಿತ್ವ ಅಥವಾ ದೃಷ್ಟಿಕೋನ

ನಾವು ಪರಿಗಣಿಸಲಿರುವ ಕೃತಿಯು ಮಹಾಕಾವ್ಯ ವಾಗಬೇಕಾದರೆ ಈ ಎಲ್ಲಾ ಅಂಗಗಳಲ್ಲಿಯೂ ಮಹೋನ್ನತಿಯ ಸಂಚಾರವಾಗಬೇಕು. ಇಲ್ಲಿ ಪಾಶ್ಚಾತ್ಯ ಮತ್ತು ಪೌರಾತ್ಯ ವಿದ್ವಾಂಸರ ಅಭಿಪ್ರಾಯಗಳನ್ನು ತೂಗಿನೋಡುತ್ತಾರೆ. ಉದಾಹರಣೆಗೆ ''ಮಹೋನ್ನತಿವೆತ್ತಸಾಹಿತ್ಯವೆಂದರೆ ಅರ್ಥವು ತುಂಬಿ ತುಳಿಕಿ ಹರಿಯುವ ಭಾಷೆ ಎಂದು ಏರಝ್ರಾಪೌಂಡ್ ಹೇಳಿದ್ದಾನೆ''[೧] ''ಕಿರಿದರೊಳೆ ಪಿರಿದರ್ಥನೆವೆ'' ಎಂಬ ನೃಪತುಂಗನ ಅಭಿಪ್ರಾಯವಾದರೂ ಇದೇ ಎನ್ನುತ್ತಾರೆ. ಮಹೋನ್ನತ ಕೃತಿಯ ಜೀವನ ವಿಮರ್ಶೆ ಇರಬೇಕೆಂಬ ಆರ್ನಾಲ್ಡನ ಮಾತನ್ನು ಗೋಕಾಕರು ಒಪ್ಪುತ್ತಾರೆ. ಶ್ರೀ ಅರವಿಂದರು ಕಂಡಿರುವ ಸೌಂದರ್ಯಾನುಭವದ ನಾಲ್ಕು ನೆಲೆಗಳಾದ 1. ಐಂದ್ರಿಯಕ 2. ಕಲ್ಪನಾಮಯ 3. ತಾತ್ವಿಕ ಮತ್ತು 4. ಆತ್ಮಿಕ ಇವುಗಳ ಉದಾಹರಣೆ ನೀಡುತ್ತಾರೆ.

ಹೀಗೆ 'ಕವಿಕಾವ್ಯ ಮಹೋನ್ನತಿ'ಯು ನವೋದಯ ಕಾಲದ ವಿಮರ್ಶೆ ಕೃತಿಗಳಲ್ಲಿ ಅತ್ಯುನ್ನತವಾದ ಮಾರ್ಗದರ್ಶಿಯಾಗಿದೆ. ಕವಿಗಳ ಕಾವ್ಯ ಮಹಾಕಾವ್ಯದ ಗುಣಗಳ ಪಡೆಯಬೇಕಾದರೆ ಅದು ಈ ಮೇಲೆ ತಿಳಿಸಿದ ಅಷ್ಟಾಂಗಗಳನ್ನು ಒಳಗೊಂಡಿರಬೇಕು ಎಂಬುದು ಗೋಕಾಕರ ಅಭಿಮತಃ ಒಟ್ಟಾರೆ ಈ ಕೃತಿಯು ಕವಿಗಳ ಕಾವ್ಯದ ಸಮಗ್ರ ವಿಮರ್ಶೆ ನಡೆಸಲು ಕಟಿಬದ್ಧವಾಗಿರುವ ಅಂಶಗಳನ್ನು ಒಳಗೊಂಡಿದೆ.

೧. ವಿ.ಕೃ.ಗೋಕಾಕ್ : ಕವಿ ಕಾವ್ಯ ಮಹೋನ್ನತಿ, ಗೆಳೆಯರ ಗುಂಪು, ಹೈದರಾಬಾದ್, ೧೯೫೭, ಪುಟ ೮೪

# ನವೋದಯ ಕಾಲದ ಕನ್ನಡ ವಿಮರ್ಶೆಯ ಇತಿಮಿತಿಗಳು

ಭಾರತೀಯ ಕಾವ್ಯ ಮೀಮಾಂಸೆಗೆ ತನ್ನದೇ ಆದ ಪ್ರಾಚೀನ ಪರಂಪರೆಯಿದೆ ಈ ಪರಂಪರೆಯನ್ನು ಅನುಸರಿಸಿಕೊಂಡೇ ಕನ್ನಡ ಕಾವ್ಯ ಪರಂಪರೆ ಬೆಳೆದು ಬಂದಿದೆ.ಇಪ್ಪತ್ತನೆಯ ಶತಮಾನದ ಆರಂಭದವರೆಗೂ ಕನ್ನಡದ ಸಾಹಿತ್ಯದ ಪ್ರಯೋಗಗಳು ಈ ಪರಂಪರೆಯೊಂದಿಗೆ ಬಂದವು.ಇಪ್ಪತ್ತನೆಯ ಶತಮಾನದ ಆರಂಭದ ದಶಕದಲ್ಲಿ ಇಂಗ್ಲೀಷ್ ಭಾಷೆ ಮತ್ತು ಸಾಹಿತ್ಯ ಭಾರತದ ಎಲ್ಲಾ ಭಾಷೆಗಳ ಮೇಲೆ ಹೇಗೋ ಹಾಗೆ ಕನ್ನಡ ಭಾಷೆ ಮತ್ತು ಆಧುನಿಕ ಸಾಹಿತ್ಯಗಳ ರೂಪಾಂತರಕ್ಕೆ ಕಾರಣವಾಯಿತು.ಈ ಪ್ರಭಾವ ಕನ್ನಡ ಸಾಹಿತ್ಯವನ್ನು ಹಿಂದಿಕ್ಕುವ ಬದಲು, ನಮ್ಮಲ್ಲಿಲ್ಲದ ಸಾಹಿತ್ಯ ಪ್ರಕಾರಗಳಾದ ಭಾವಗೀತೆ, ನಾಟಕ , ಕಾದಂಬರಿ, ವಿಮರ್ಶೆ ಮುಂತಾದವು ರೂಪುಗೊಳ್ಳಲು ಪ್ರೇರಣೆ ನೀಡಿತು.ಹೀಗೆ ನವೋದಯ ಸಂದರ್ಭದಲ್ಲಿ ಮೊಟ್ಟಮೊದಲು ವಿಮರ್ಶೆಯ ಪರಿಕಲ್ಪನೆ ಹುಟ್ಟಿಕೊಂಡಿತು. ನವೋದಯ ಕಾಲದ ಸಾಹಿತಿಗಳೆಲ್ಲರೂ ಆಂಗ್ಲಭಾಷೆ ಮತ್ತು ಸಾಹಿತ್ಯಗಳನ್ನು ಕೇಂದ್ರವಾಗಿಟ್ಟುಕೊಂಡು ಅಧ್ಯಯನ ಮಾಡಿದ್ದು ದೇಶಿಯತೆಯನ್ನು ಹೊಸ ಪ್ರಭಾವದೊಂದಿಗೆ ಪರೀಕ್ಷಿಸಿಅದರ ಮಹತ್ವ ಮತ್ತು ಇತಿಮಿತಿಗಳನ್ನು ಕಂಡುಕೊಂಡರು. ಹೀಗೆ ಇಂಗ್ಲೀಷ್ ಸಾಹಿತ್ಯ ಪರಂಪರೆ ಕನ್ನಡ ಸಾಹಿತ್ಯ ಪರಂಪರೆಗೆ ಒಂದು ಹೊಸ ತಿರುವನ್ನು ತಂದುಕೊಟ್ಟಿತು.

ಇಂತಹ ಸನ್ನಿವೇಶದಲ್ಲಿ ಹುಟ್ಟಿದ ಸಾಹಿತ್ಯ ವಿಮರ್ಶೆಯ ಹೊಸದಾಗಿ ಹುಟ್ಟಿದ ಸಾಹಿತ್ಯ ಪ್ರಕಾರಗಳನ್ನು ವಿವರಿಸಿ, ಅದನ್ನು ಸಮರ್ಥಿಸಿಕೊಳ್ಳುವ ಕೆಲಸವನ್ನು ಮಾಡಬೇಕಾಯಿತು.ಹೊಸದಾಗಿ ರೂಪುಗೊಂಡು ಸಾಹಿತ್ಯವನ್ನು ವೀಕ್ಷಿಸಿ ಮಾರ್ಗದರ್ಶನ ನೀಡಿ, ಸಾಹಿತ್ಯ ಬೆಳೆದಂತೆ ಸಾಹಿತ್ಯ ವಿಮರ್ಶೆಯೂ ಬೆಳೆಯುತ್ತಾ ಹೋಗಬೇಕಾಯಿತು.ಈ ಕೆಲಸವನ್ನು ಕನ್ನಡ ನವೋದಯ ವಿಮರ್ಶೆ ಸಮರ್ಥವಾಗಿ ಮಾಡಿತು.ಕನ್ನಡ ನವೋದಯ ವಿಮರ್ಶೆಯ ಹೆಚ್ಚುಭಾಗ ಕನ್ನಡ ಪ್ರಾಚೀನ ಸಾಹಿತ್ಯವನ್ನು ಕುರಿತಾಗಿತ್ತು ಎಂಬುದು ಗಮನಾರ್ಹವಾದ ಅಂಶವಾಗಿದೆ.ಸಮಕಾಲೀನ ಕೃತಿಗಳನ್ನು ವಿಮರ್ಶೆ ಮಾಡಿದರೂ ಅದು ಇತರರ ಕೃತಿಗಳಿಗೆ ಬರೆದು ಮುನ್ನುಡಿಯ ರೂಪುದಲ್ಲಿತ್ತು.ನವೋದಯದ ಪ್ರಮುಖ ವಿಮರ್ಶಕರೆಲ್ಲ ಪಾಶ್ಚಾತ್ಯ ಸಾಹಿತ್ಯವನ್ನು ಅಭ್ಯಾಸ ಮಾಡಿದವರಾಗಿದ್ದಾರೆ. ಆದುದರಿಂದ ಇವರೆಲ್ಲ ಕನ್ನಡ ಸಾಹಿತ್ಯವನ್ನು ಪಾಶ್ಚಾತ್ಯ ದೃಷ್ಟಿಕೋನದಿಂದ ನೋಡುವ ಪ್ರಯತ್ನ ಮಾಡಿದರು.ನಮ್ಮಲ್ಲಿ ಕಾವ್ಯಮೀಮಾಂಸೆ ಶ್ರೀಮಂತವಾಗಿದ್ದರೂ ವಿಮರ್ಶೆ ಬೆಳೆದು ಬಂದಿಲ್ಲದಿರುವುದರಿಂದ ಅವರಿಗೆ ವಿಮರ್ಶೆಯ ಬುನಾದಿಯನ್ನು ಕಟ್ಟಿಕೊಳ್ಳಲು ಸಾಧ್ಯವಾಗಲಿಲ್ಲ.ಹಾಗೆಯೇ ಪಾಶ್ಚಾತ್ಯ ತತ್ತ್ವಗಳನ್ನು ಯಥಾವತ್ ನಿರೂಪಣೆ ಮಾಡಲಿಲ್ಲ.ಬದಲಾಗಿ ಭಾರತೀಯ ಕಾವ್ಯಮೀಮಾಂಸೆಯ ಪರಿಕಲ್ಪನೆ ಮಚ್ಚು ಪಾಶ್ಚಾತ್ಯ ವಿಮರ್ಶಾ ಪರಿಕಲ್ಪನೆಗಳನ್ನು ಒಟ್ಟಿಗೆ ಸೇರಿಸಿ ಚರ್ಚಿಸಿ ತಮ್ಮದೇ ಆದ ವಿಮರ್ಶಾ ಸಿದ್ಧಾಂತಗಳನ್ನು ರೂಪಿಸಿಕೊಳ್ಳಲು ಪ್ರಯತ್ನ ಮಾಡಿದರು. ಆದುದರಿಂದ

ನವೋದಯದ ಕಾಲದ ಕನ್ನಡ ವಿಮರ್ಶೆಯ ಇತಿಮಿತಿಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

★ ಪಾಶ್ಚಾತ್ಯವು ಸೇರಿದಂತೆ ಇತರೆ ಪ್ರಭಾವಗಳನ್ನು ನವೋದಯ ವಿಮರ್ಶೆ ತೆರೆದ ಮನಸ್ಸಿನಿಂದ ಸ್ವೀಕರಿಸಿತು.

★ ನವೋದಯದ ಪ್ರಮುಖ ವಿಮರ್ಶಕರು ಇಂಗ್ಲೀಷ್ ರೋಮ್ಯಾಂಟಿಕ್ ವಿಮರ್ಶೆಯ ಜೊತೆಗೆ ಐ.ಎ.ರಿಚರ್ಡ್ಸ್, ಟಿ.ಎಸ್,ಎಲಿಯಟ್,ಎಫ್.ಆರ್.ಲೀವೀಸ್ ಮುಂತಾದವರ ಪ್ರಭಾವಕ್ಕೆ ಒಳಗಾದರು.

★ ನವೋದಯ ವಿರ್ಮಶಕರು ಭಾರತೀಯ ಕಾವ್ಯ ಮೀಮಾಂಸೆ ಮತ್ತು ಪಾಶ್ಚಾತ್ಯ ಪ್ರಭಾವಗಳನ್ನು ಮುಖಾಮುಖಿಯಾಗಿ ಹೊಸ ಸಾಹಿತ್ಯ ವಿಮರ್ಶೆಯ ಸಿದ್ಧಾಂತಗಳನ್ನು ಕಂಡುಕೊಂಡರು.

★ ಕೃತಿ ಮತ್ತು ಅದನ್ನು ರಚಿಸಿದ ಕವಿ ಈ ಎರಡು ಅಂಶಗಳನ್ನು ಗಮನಿಸಿ ವಿಮರ್ಶಿಸುವ ಪರಿಪಾಠ ಬೆಳೆದಿತ್ತು.

★ ಸಾಹಿತ್ಯ ಕೃತಿಯೊಂದನ್ನು ಅದರ ಮತ,ಧರ್ಮಗಳ ವಿಚಾರಗಳನ್ನು ಹೊರತಾಗಿಸಿಕೇವಲ ಸಾಹಿತ್ಯಿಕವಾಗಿ ವಿವೇಚಿಸುವ ಪರಂಪರೆಯನ್ನು ನವೋದಯ ವಿಮರ್ಶೆ ಕಂಡುಕೊಂಡಿತು.

★ ನವೋದಯ ಕಾಲದ ಪ್ರಮುಖ ಸಾಹಿತಿ ತಾನು ರಚಿಸಿರುವ ಸಾಹಿತ್ಯದ ಲಕ್ಷಣಗಳನ್ನು ಕುರಿತು ತಾನೇ ಕೆಲ ಮಾತುಗಳನ್ನು ಹೇಳಬೇಕಾಯಿತು.

★ ಪರಾಂಪರಾಗತವಾಗಿ ಬಂದ ಹಳೆಯ ಸಾಹಿತ್ಯಕ್ಕಿಂತ ತೀರ ಭಿನ್ನವಾದ ಹೊಸ ಸಾಹಿತ್ಯ ಜನರಿಗೆ ತಿಳಿದಿರಬೇಕೆಂಬುದೇ ನವೋದಯ ವಿಮರ್ಶೆಯ ಉದ್ದೇಶವಾಗಿತ್ತು.

★ ನವೋದಯ ಕಾಲದ ಸಾಹಿತಿಗಳಿಗೆ ಪಾಶ್ಚಾತ್ಯ ಸಾಹಿತ್ಯ ಹೇಗೋ ಹಾಗೆ ಪ್ರಾಚೀನ ಸಾಹಿತ್ಯವು ಕೂಡ ಪ್ರೇರಣೆ ನೀಡಿತು.ಕೆಲವರು ಪ್ರಾಚೀನ ಸಾಹಿತ್ಯಕ್ಕೆ ಪ್ರತಿಕ್ರಿಯೆಯನ್ನು ತೋರಿಸಿದರು.

★ ನವೋದಯ ವಿಮರ್ಶೆಯ ಮುಕ್ಕಾಲು ಪಾಲು ಪ್ರಾಚೀನ ಸಾಹಿತ್ಯದ ಬಗ್ಗೆಯೇ ಆಗಿದೆ.ಉದಾಹರಣೆಗೆ ಮಾಸ್ತಿಯವರ 'ಆದಿಕವಿವಾಲ್ಮೀಕಿ' ಮುಳಿಯ ತಿಮ್ಮಪ್ಪನವರ 'ನಾಡೋಜಪಂಪ' ಕುವೆಂಪು ಅವರ ವಿಮರ್ಶಾ ಕೃತಿಗಳಲ್ಲಿರುವ ಕೆಲವು ಲೇಖನಗಳು, ತಿ.ನಂ.ಶ್ರೀಯವರ ಕೆಲವು ಲೇಖನಗಳು ಇತ್ಯಾದಿ.

★ ಪಾಶ್ಚಾತ್ಯ ಮಹಾಕಾವ್ಯಗಳೊಡನೆ ಪ್ರಾಚೀನ ಕಾವ್ಯಗಳನ್ನು ಹೋಲಿಸಿ ನೋಡುವ ಕಾವ್ಯ ನವೋದಯ ವಿಮರ್ಶೆಯಲ್ಲಿ ಹುಟ್ಟಿಕೊಂಡಿತು.

★ ಕನ್ನಡಕ್ಕೆ ಶ್ರೇಷ್ಠ ತರಗತಿಯ ವಿಮರ್ಶೆಯಲ್ಲಿ ಕೊಡಲು ನವೋದಯ ವಿಮರ್ಶೆಯಿಂದ ಸಾಧ್ಯವಾಗಿಲ್ಲ.ಕಾರಣವೆಂದರೆ ಹೊಸಗನ್ನಡ ಸಾಹಿತ್ಯಕ್ಕೆ ಪ್ರಾತಿನಿಧಿಕ ವಿಮರ್ಶಕನೊಬ್ಬ ಇರಲಿಲ್ಲ.ಬಿ.ಎಂ.ಶ್ರೀಕಂಠಯ್ಯನವರಲ್ಲಿ ಆ ಯೋಗ್ಯತೆಯಿದ್ದರು, ಅವರು ಸಾಹಿತ್ಯವನ್ನು ಪ್ರೇರಿಸುವುದರ ಕಡೆಗೆ ಹೆಚ್ಚು ಉತ್ಸಾಹ ತೋರಿದರು.ಮಾಸ್ತಿಯವರು ನಿರಂತರ ಕಾವ್ಯ ನಿರ್ಮಿತಿಯಲ್ಲಿ ತೊಡಗಿದರು.ಬೆಂದ್ರೆಯವರು ತಕ್ಕಷ್ಟು ಕೆಲಸ ಮಾಡಿದರಷ್ಟೇ. ಹೀಗೆ ನವೋದಯದ ಸಾಹಿತಿಗಳೆಲ್ಲಾ ಈ ದಿಶೆಯಲ್ಲಿ ಕೆಲಸ ಮಾಡಿದರೇ ಹೊರತು ಯಾರೊಬ್ಬರು ವಿಮರ್ಶೆಯೊಂದನ್ನು ಮಾರ್ಗವನ್ನಾಗಿ ಮಾಡಿಕೊಳ್ಳಲಿಲ್ಲ. ನವೋದಯ ವಿಮರ್ಶೆಗೆ ಇದೊಂದು ದೊಡ್ಡ ಮಿತಿಯಾಗಿದೆ.

ಆದರೆ ನವೋದಯ ವಿಮರ್ಶೆ ಬೆಳೆದು ಬಂದ ಸಂದರ್ಭವನ್ನು ನಾವು ಗಮನಿಸಬೇಕು.'ವಿಮರ್ಶೆ' ಎಂಬ ಪರಿಕಲ್ಪನೆಯೇ ಇಲ್ಲದಿದ್ದ ಕಾಲದಲ್ಲಿ ಸಾಹಿತಿಗಳು ತಮ್ಮ ಸಾಹಿತ್ಯ ರಚನೆಯ ಜೊತೆಗೆ ವಿಮರ್ಶೆಯನ್ನು ಬೆಳೆಸಿಕೊಂಡು ಬಂದಿರುವುದು ಹೆಮ್ಮೆಯ ವಿಷಯ. ನವೋದಯ ವಿಮರ್ಶೆಯು ಎಷ್ಟು ಇತಿ ಮಿತಿಗಳನ್ನು ಹೊಂದಿದ್ದರೂ, ಕನ್ನಡದಲ್ಲಿ ವಿಮರ್ಶಾ ಪ್ರಸ್ಥಾನಕ್ಕೆ ಅಡಿಪಾಯ ಹಾಕಿಕೊಟ್ಟ ಕಾಲವೆಂಬುದರಲ್ಲಿ ಸಂಶಯವಿಲ್ಲ.

# ಉಪಸಂಹಾರ

ಭಾರತೀಯ ಕಾವ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ನವೋದಯ ವಿಮರ್ಶಕರು ಪಾಶ್ಚಾತ್ಯ ವಿಮರ್ಶೆ ಪರಿಕಲ್ಪನೆಗಳನ್ನು ಸ್ವೀಕರಿಸಿದರು.ಅದರಲ್ಲಿ ತಮ್ಮತನವನ್ನು ಕಂಡುಕೊಂಡು,ಪ್ರತಿಪಾದಿಸಿದುದು ಕನ್ನಡದ ಸಂದರ್ಭದಲ್ಲಿ ಮಹತ್ವದ ಸಾಧನೆಯಾಗಿದೆ.

'ನವೋದಯ ಕಾಲದ ಕನ್ನಡ ವಿಮರ್ಶೆ' ವಿಷಯವನ್ನು ಪ್ರಸ್ತುತಪಡಿಸುವ ನಿಟ್ಟಿನಲ್ಲಿ ನಿಬಂಧವನ್ನು ೫ ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದೇನೆ ಮೊದಲ ಅಧ್ಯಾಯದಲ್ಲಿ ನಿಬಂಧದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ಮತ್ತು ಎರಡನೆಯ ಅಧ್ಯಾಯದಲ್ಲಿ ವಿಮರ್ಶೆಯ ಅರ್ಥ ಸ್ವರೂಪ ಕಾರ್ಯಗಳನ್ನು ವಿವರಿಸಿದ್ದೇನೆ.ಮೂರನೇಯ ಅಧ್ಯಾಯದಲ್ಲಿ ನವೋದಯ ಕಾಲದ ಪ್ರಮುಖ ವಿಮರ್ಶಕರ ಸಂಕ್ಷಿಪ್ತ ಪರಿಚಯ ಮಾಡಿದ್ದೇನೆ.ನಾಲ್ಕನೇ ಅಧ್ಯಾಯದಲ್ಲಿ ನವೋದಯ ಕಾಲದ ವಿಮರ್ಶಾ ಕೃತಿಗಳಲ್ಲಿ ಪ್ರಾತಿನಿಧಿಕ ಕೃತಿಗಳ ವಿಶ್ಲೇಷಣೆಯನ್ನು ಕೈಗೊಂಡಿದ್ದೇನೆ. ಐದನೆಯ ಅಧ್ಯಾಯದಲ್ಲಿ ನವೋದಯ ಕಾಲದ ಕನ್ನಡ ವಿಮರ್ಶೆಯ ಇತಿಮಿತಿಗಳನ್ನು ಗುರುತಿಸಲು ಪ್ರಯತ್ನಿಸಿದ್ದೇನೆ. ಈ ಐದು ಅಧ್ಯಾಯಗಳಿಂದ ಪಡೆದ ಫಲಿತಗಳು ಈ ಕೆಳಗಿನಂತಿವೆ.

1. ನಿಬಂಧದ ರಚನೆಗೆ ನವೋದಯ ಕಾಲದ ವಿಮರ್ಶೆಯನ್ನು ಏಕೆ ಆಯ್ದುಕೊಂಡೆ ಎಂಬ ಸಂದೇಹಕ್ಕೆ ಮೊದಲ ಅಧ್ಯಾದಲ್ಲಿ ಸ್ಪಷ್ಟ ಉತ್ತರವಿದೆ.

2. ಪ್ರಬಂಧಕ್ಕೆ ಆಯ್ಕೆ ಮಾಡಿಕೊಂಡಿರುವುದು ವಿಮರ್ಶೆಗೆ ಸಂಬಂಧಿಸುವುದರಿಂದ ವಿಮರ್ಶೆಯ ಅರ್ಥ,ಸ್ವರೂಪ, ಕಾರ್ಯಗಳನ್ನು ತಿಳಿಸಿರುವುದರಿಂದ ಅಧ್ಯಯನಕ್ಕೆ ಒಳಪಡುವ ನಿಬಂಧವನ್ನು ಅರ್ಥಮಾಡಿಕೊಳ್ಳಲು ಅನುಕೂಲವಾಗಿದೆ.

3. ನವೋದಯ ಪ್ರಮುಖ ಕಾಲದ ವಿಮರ್ಶಕರನ್ನು ಪರಿಚಯ ಮಾಡಿಕೊಟ್ಟಿರುವುದರಿಂದ ಅವರ ಕೃತಿಗಳನ್ನು ಅಧ್ಯಯನ ಮಾಡಲು ಸಹಾಯಕವಾಗಿದೆ.

4. ನಿಬಂಧದ ಹೃದಯ ಭಾಗವಾದ ಐದನೆಯ ಅಧ್ಯಾಯದಲ್ಲಿ ಪ್ರಾತಿನಿಧಿಕ ವಿಮರ್ಶಾ ಕೃತಿಗಳ ವಿಶ್ಲೇಷಣೆ ಕೈಗೊಂಡಿರುವುದರಿಂದ ಮುಂದೆ ಇಂತಹ ಮಾರ್ಗದಲ್ಲಿ ತೊಡಗುವವರಿಗೆ ಸಹಾಕವಾಗಿದೆ.

5. ಕೊನೆಯಲ್ಲಿ ನವೋದಯ ವಿಮರ್ಶೆಯ ಇತಿಮಿತಿಗಳನ್ನು ಗುರ್ತಿಸಿರುವುದರಿಂದ, ಆಸಕ್ತರು ಈ ವಿಷಯದಲ್ಲಿ ಪುನರ್ ಅವಲೋಕನ ಮಾಡಲು ಅವಕಾಶ ಕಲ್ಪಿಸಿದೆ.

ಒಟ್ಟಾರೆ ಇದೊಂದು ತಲಸ್ಪರ್ಶಿ ಅಧ್ಯಯನ ಎಂದು ಹೇಳಲಾರೆ.ನವೋದಯ ಕಾಲದ ಪ್ರಾತಿನಿಧಿಕ ವಿಮರ್ಶಾಕೃತಿಗಳ ವಿವರಣೆ ಮಾತ್ರ ಇಲ್ಲಿದೆ.ಆಸಕ್ತರು, ಅಭಿರುಚಿ ಉಳ್ಳವರು ಈ ವಿಷಯದಲ್ಲಿ ಮುನ್ನಡೆದರೆ, ಮತ್ತಷ್ಟು ಪ್ರಯತ್ನ ಮಾಡಿದರೆ ಸಾಹಿತ್ಯದ ಒಂದು ಹೊಸ ದಿಕ್ಕಿನತ್ತ ಓದುಗರನ್ನು ಕರೆದುಕೊಂಡು ಹೋಗಬಹುದು.

# ಪರಾಮರ್ಶನ ಗ್ರಂಥಗಳು

೧. ಆದಿಕವಿ ವಾಲ್ಮೀಕಿ, ಲೇಖಕರು-ಮಾಸ್ತಿ ವೆಂಕಟೇಶ ಅಯ್ಯಂಗಾರ್, ಪ್ರಕಾಶನ-ಮಾಸ್ತಿ ವೆಂಕಟೇಶ ಅಯ್ಯಂಗಾರ್, ಜೀವನ ಕಾರ್ಯಾಲಯ ಟ್ರಸ್ಟ್(ರಿ), ಬೆಂಗಳೂರು-೫೬೦೦೧೯, ವರ್ಷ-೧೯೯೫.

೨. ಕನ್ನಡ ನವೋದಯ ಕಾವ್ಯ, ವಿಮರ್ಶೆಯ ಮೇಲೆ ಪಾಶ್ಚಾತ್ಯ, ವಿಮರ್ಶೆಯ ಪ್ರಭಾವ, ಲೇಖಕರು-ಡಾ.ಎನ್.ಕುಮುದ, ಪ್ರಕಾಶನ-ಚೇತನಬುಕ್‌ಹೌಸ್, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮಿ ಟಾಕೀಸ್ ಹಿಂಭಾಗ, ಮೈಸೂರು-೫೭೦೦೦೨೪, ವರ್ಷ-೨೦೦೬

೩. ಕವಿ ಕಾವ್ಯ ದೃಷ್ಟಿ, ಲೇಖಕರು-ವಿ.ಸೀತಾರಾಮಯ್ಯ, ಪ್ರಕಾಶನ-ಸುರಭಿ ಪ್ರಕಾಶನ, ಮೈಸೂರು ವರ್ಷ-೧೯೫೫,

೪. ಕವಿಕಾವ್ಯ ಮಹೋನ್ನತಿ, ಲೇಖಕರುವಿ.ಕೃ.ಗೋಪಾಲ್, ಪ್ರಕಾಶನ-ಗೆಳೆಯರ ಗುಂಪು, ಹೈದರಬಾದ್, ವರ್ಷ-೧೯೩೫

೫. ಕುವೆಂಪು ಸಾಹಿತ್ಯ:ಕೆಲವು ಅಧ್ಯಯನಗಳು ಸಂಪುಟ-೨, ಲೇಖಕರು-ದೇಜಗೌ, ಪ್ರಕಾಶನ-ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾಪರಿಷತ್ತು, ಕವಿಶೈಲ ಜಯಲಕ್ಷ್ಮೀಪುರಂ, ಮೈಸೂರು-೧೨, ವರ್ಷ-೧೯೮೨

೬. ಕನ್ನಡ ವಿಮರ್ಶೆಯ ಮಾರ್ಗ, ಸಂಪಾದಕರು-ಅರವಿಂದ ಮಾಲಗತ್ತಿ, ಪ್ರಕಾಶನ - ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ವರ್ಷ - ೨೦೦೪

೭. ಕಾವ್ಯ ವಿಹಾರ, ಲೇಖಕರು-ಕುವೆಂಪು, ಪ್ರಕಾಶನ-ಉದಯರವಿ ಪ್ರಕಾಶನ ವಾಣಿವಿಲಾಸಪುರಂ, ಮೈಸೂರು-೫೭೦೦೨, ವರ್ಷ-೧೯೯೭.

೮. ಕಾವ್ಯಸಮೀಕ್ಷೆ, ಲೇಖಕರು-ಪ್ರೊ.ತೀ.ನಂ.ಶ್ರೀಕಂಠಯ್ಯ, ಪ್ರಕಾಶನ- ಕಾವ್ಯಾಲಯ ಪ್ರಕಾಶನ, ಜಯಗನರ ಮೈಸೂರು-೫೭೦೦೧೪, ವರ್ಷ-೧೯೯೭

೯. ಜೀವನ ಸೌಂದರ್ಯ ಮತ್ತು ಸಾಹಿತ್ಯ, ಲೇಖಕರು-ಡಿ.ವಿ.ಜಿ, ಪ್ರಕಾಶನ-ಕಾವ್ಯಾಲಯ ಪ್ರಕಾಶಕರು, ಜಯನಗರ ಮೈಸೂರು-೫೭೦೦೧೪,ವರ್ಷ-೧೯೯೭.

೧೦. ತಪೋನಂದನ, ಲೇಖಕರು-ಕುವೆಂಪು, ಪ್ರಕಾಶನ-ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು-೫೭೦೦೦೧, ವರ್ಷ-೨೦೦೫

೧೧. ದ್ರೌಪದಿಯ ಶ್ರೀಮುಡಿ, ಲೇಖಕರು-ಕುವೆಂಪು, ಪ್ರಕಾಶನ-ಉದಯರವಿ ಪ್ರಕಾಶ, ವಾಣಿವಿಲಾಸಪುರಂ, ಮೈಸೂರು-೫೬೦೦೦೨, ವರ್ಷ-೨೦೦೫

೧೨. ನಾಡೋಜ ಪಂಪ, ಲೇಖಕರು-ಮುಳಿಯ ತಿಮ್ಮಪ್ಪಯ್ಯ,ಸಂಪಾದಕ-ಎಂ.ಕೇಶವಭಟ್ಟ, ಪ್ರಕಾಶನ-'ಸುವರ್ಣ ಕರ್ನಾಟಕ' ಸಂದರ್ಭದಲ್ಲಿ ಸರ್ಕಾರದ ಪರವಾಗಿ ಕೆ.ಆರ್.ನಿರಂಜನ, ಆಯುಕ್ತರು, ಕನ್ನಡ ಸಂಸ್ಕೃತಿ ಇಲಾಖೆ ಇವರಿಂದ ಪ್ರಕಟಿತ,ವರ್ಷ೨೦೦೬

.೧೩. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಲೇಖಕರು-ಕೀರ್ತಿನಾಥ ಕುರ್ತುಕೋಟಿ, ಪ್ರಕಾಶನ-ಮನೋಹರ ಗ್ರಂಥಮಾಲಾ, ಲಕ್ಷ್ಮೀಭವನ, ಸುಭಾಸರಸ್ತೆ, ಧಾರವಾಡ-೫೮೦೦೦೧, ವರ್ಷ-೨೦೦೨

೧೪. ವಿಭೂತಿ ಪೂಜೆ, ಲೇಖಕರು-ಕುವೆಂಪು, ಪ್ರಕಾಶನ-ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು-೫೭೦೦೦೯, ವರ್ಷ-೧೯೯೬

೧೫. ವಿಮರ್ಶೆಯ ಪೂರ್ವ-ಪಶ್ಚಿಮ, ಲೇಖಕರು-ಜಿ.ಎಸ್.ಶಿವರುದ್ರಪ್ಪ, ಪ್ರಕಾಶನ-ಸಾಹಿತ್ಯ ಭಂಡಾರ, ಜಂಗಮ ಮೇಸ್ತ್ರಿಗಲ್ಲಿ ಬಳೇಪೇಟೆ, ಬೆಂಗಳೂರು-೫೬೦೦೫೩, ವರ್ಷ - ೧೯೯೬

೧೬. ಶೈಲಿ, ಲೇಖಕರು-ಎಸ್.ವಿ.ರಂಗಣ್ಣ, ಪ್ರಕಾಶನ-ಮನೋಹರ ಗ್ರಂಥಮಾಲೆ, ಲಕ್ಷ್ಮಿಭವನ,ಸುಭಾಶ ರಸ್ತೆ,ಧಾರವಾಡ-೫೮೦೦೦೧, ವರ್ಷ-೧೯೭೧

೧೭. ಸಮಾಲೋಕನ,ಲೇಖಕರು-ತಿ.ನಂ.ಶ್ರೀಕಂಠಯ್ಯ, ಪ್ರಕಾಶನ-ಶೃಂಗಾರ ಪ್ರಕಾಶನ, ಬ್ರಾಹ್ಮಣರ ಬೀದಿ, ಚಿಕ್ಕನಾಯಕನಹಳ್ಳಿ -೫೭೨೨೧೪, ವರ್ಷ-೧೯೯೯

೧೮. ಸಾಹಿತ್ಯ ಮತ್ತು ಸತ್ಯ, ಲೇಖಕರು-ಎ.ಎನ್.ಮೂರ್ತಿರಾವ್ ಪ್ರಕಾಶನ-ಡಿ.ವಿ.ಕೆ.ಮೂರ್ತಿ, ಪ್ರಕಾಶಕರು-ಮೈಸೂರು ೪, ವರ್ಷ-೨೦೦೫

೧೯. ಸಾಹಿತ್ಯ ವಿಮರ್ಶೆಯ ತತ್ವಗಳು, ಲೆಖಕರು - ಸಿ. ಪಿ. ಕೆ., ಪ್ರಕಾಶನ - ಚೇತನ ಬುಕ್ ಹೌಸ್, ಅಂಜನಾದ್ರಿ ರೇಣುಕಾಚಾರ್ಯ, ದೇವಸ್ಥಾನ ರಸ್ತೆ, ಮೈಸೂರು., ವರ್ಷ - ೨೦೦೦

೨೦. ಸಾಹಿತ್ಯ ವಿಮರ್ಶೆ, ಲೇಖಕರು-ಸಿ.ಎನ್.ರಾಮಚಂದ್ರನ್,ಪ್ರಕಾಶನ-ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ ಜೆ.ಸಿ.ರಸ್ತೆ ಬೆಂಗಳೂರು-೫೬೦೦೦೨, ವರ್ಷ-೨೦೦೨

೨೧. ಹೊಸಗನ್ನಡ ಸಾಹಿತ್ಯ ಚರಿತ್ರೆ, ಲೇಖಕರು-ಎಲ್.ಎಸ್.ಶೇಷಗಿರಿರಾವ್, ಪ್ರಕಾಶನ-ಅಂಕಿತ ಪುಸ್ತಕ, ೫೩-ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧೀಬಜಾರ್ ಮುಖ್ಯರಸ್ತೆ, ಬಸವನಗುಡಿ ಬೆಂಗಳೂರು-೫೬೦೦೦೪,ವರ್ಷ-೨೦೦೨.

